## ಪ್ರಚಾರಪುಸ್ತಕಮಾಲೆ

## ಪುಸ್ತಕಗಳು ದೊರೆಯುವ ಸ್ಥಳಗಳು :

೧. ಕರ್ಣಾಟಕ ಪ್ರಕಟನಾಲಯ, ಕೋಟೆ, ಬೆಂಗಳೂರು ಸಿಟಿ.

೨. ಸತ್ಯಶೋಧನ ಪುಸ್ತಕಭಂಡಾರ, ಲ್ಯಾನ್ಸ್‌ಡೌನ್ ಬಿಲ್ಡಿಂಗ್ಸ್, ಮೈಸೂರು.

೩. ಮನೋಹರ ಗ್ರಂಥಭಂಡಾರ, ಧಾರವಾಡ.

೪. ಶ್ರೀ ಶಂಕರ ಕರ್ಣಾಟಕ ಪುಸ್ತಕಭಂಡಾರ, ಧಾರವಾಡ.

೫. ಮ|| ರಾ|| ಪ್ಯಾಟಿ ಶಾಮರಾವ್, ಪುಸ್ತಕ ವ್ಯಾಪಾರಿಗಳು, ಬೆಳಗಾವಿ.

೬. ಸಾಹಿತ್ಯಭಂಡಾರ, ಹುಬ್ಬಳ್ಳಿ.

೭. ಬಾಲಸಾಹಿತ್ಯ ಮಂಡಲ, ಮಂಗಳೂರು.

೮. ಕರ್ಣಾಟಕಸಂಘ, ಶಿವಮೊಗ್ಗ.

೯. ,, ಮಂಡ್ಯ.

೧೦. ,, ಕೋಲಾರ.

೧೧. ,, ತಿಪಟೂರು.

೧೨. ,, ಕೃಷ್ಣರಾಜನಗರ.

ಪುಸ್ತಕಗಳನ್ನೂ ವ್ಯಾಪಾರವಿವರಗಳನ್ನೂ—
ಈ ಕೆಳಗಿನ ವಿಳಾಸಕ್ಕೆ ಬರೆದು ತರಿಸಿಕೊಳ್ಳಬಹುದು :

ಸಂಪಾದಕ, ಪ್ರಚಾರಪುಸ್ತಕಮಾಲೆ,
ಮಹಾರಾಜರವರ ಕಾಲೇಜು, ಮೈಸೂರು.

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ — ೧೮

# ಕಾಳಿದಾಸನ ಕಾವ್ಯಗಳು

ಎಸ್. ರಾಮಚಂದ್ರರಾವ್, ಎಂ.ಎ.




ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

ಮೈಸೂರು

೧೯೪೦

# ಮುನ್ನುಡಿ

ಮೈಸೂರು ವಿಶ್ವವಿದ್ಯಾನಿಲಯದ ಚಾನ್ಸಲರವರಾದ ಆಳುವ ಮಹಾಸ್ವಾಮಿಯವರು ಮೊದಲನೆಯ ಸೆನೆಟ್ ಸಭೆಯ ಪ್ರಾರಂಭೋತ್ಸವದ ಭಾಷಣದಲ್ಲಿಯೂ, ಪುನಃ ಮೊದಲನೆಯ ಕಾನ್ವೊಕೇಷನ್ ಮಹೋತ್ಸವದ ಭಾಷಣದಲ್ಲಿಯೂ ವಿಶ್ವವಿದ್ಯಾನಿಲಯದ ಪಾಲಿಗೆ ಹಲವು ಕರ್ತವ್ಯಗಳನ್ನು ಅಪ್ಪಣೆಮಾಡಿದರು. ಅವುಗಳಲ್ಲಿ ವಿಶ್ಲೇಷವಾದವು ಇವೆರಡು: ಒಳ್ಳೆಯ ಕನ್ನಡದಲ್ಲಿ ಬರೆದ ಪುಸ್ತಕಗಳ ಪ್ರಕಟನೆ, ಹಾಗೂ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ. ಮತ್ತು ಶ್ರೀಮನ್ಮಹಾರಾಜರವರ ಪ್ರಜೆಗಳಲ್ಲಿ ಯಾರು ಕಾರಣಾಂತರಗಳಿಂದ ಕ್ರಮಬದ್ಧವಾದ ಶಿಕ್ಷಣಶಿಸ್ತುಗಳಲ್ಲಿ ಭಾಗವಹಿಸಿ ಪರೀಕ್ಷೆಗಳಿಗೆ ಕೂಡಲು ಶಕ್ತರಲ್ಲವೋ ಅಂಥವರಲ್ಲಿ ಜ್ಞಾನಪ್ರಸಾರ ಮಾಡುವುದು; ಅಲ್ಲದೆ ಮೈಸೂರು, ಬೆಂಗಳೂರು ಈ ಎರಡು ಹಿರಿಯ ಪಟ್ಟಣಗಳಲ್ಲಿ ದೊರಕುವ ವಿದ್ಯಾಭ್ಯಾಸಾನುಕೂಲ್ಯಗಳನ್ನು ಪಡೆದಿಲ್ಲದ, ಸಂಸ್ಥಾನದ ದೂರಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಉಚ್ಚ ವರ್ಗದ ಸಂಸ್ಕೃತಿಯನ್ನು ಹರಡುವುದು.

ಈ ಇಪ್ಪತ್ತುಮೂರು ವರ್ಷಗಳಿಂದಲೂ ವಿಶ್ವವಿದ್ಯಾನಿಲಯವು ಈ ಎರಡು ಮುಖ್ಯ ಧ್ಯೇಯಗಳನ್ನು ತನ್ನ ಮುಂದೆ ತಪ್ಪದೆ ನಿಲ್ಲಿಸಿಕೊಂಡಿದೆ. ಅದರ ಕನ್ನಡ ಪ್ರಕಟನ ಶಾಖೆಯು ಕೆಲವು ಪ್ರಸಿದ್ಧ ಹಳಗನ್ನಡ ಕಾವ್ಯಗಳನ್ನು ಎಚ್ಚರಿಕೆಯಿಂದ ಪರಿಷ್ಕರಿಸಿ ಅಚ್ಚು ಹಾಕಿಸಿದೆ; ಅಲ್ಲದೆ, ಸಾಹಿತ್ಯ ವಿಜ್ಞಾನ ವಿಷಯಗಳನ್ನು ಕುರಿತ ಕೆಲವು ಲಘು ಪುಸ್ತಕಗಳನ್ನೂ ಹೊರತಂದಿದೆ. ಪ್ರಚಾರೋಪನ್ಯಾಸ ಸಮಿತಿಯವರು ಸಂಸ್ಥಾನದ ಎಲ್ಲ ಭಾಗಗಳ ಅನೇಕ ಕೇಂದ್ರಗಳಲ್ಲಿ ಹೆಚ್ಚಾಗಿ ಕನ್ನಡದಲ್ಲಿಯೇ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದಾರೆ.

ಇತ್ತೀಚೆಗೆ ಒಂದು ಫಲದಾಯಕವಾದ ಕಾರ್ಯಕ್ರಮ ಬೆಳೆದು ಬರುತ್ತಿದೆ. ವಿಷಯ ಒಂದೊಂದಕ್ಕೆ ಒಂದೊಂದರಂತೆ ಬಿಡಿ ಉಪನ್ಯಾಸ

ವನ್ನು ಕೊಡಿಸುವುದರ ಜೊತೆಗೆ, ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದ ಸಹಕಾರದಿಂದ ಸಂಸ್ಕೃತಿ ಸಪ್ತಾಹಗಳೆಂದು ಈಗಾಗಲೇ ಕರೆಯಲ್ಪಡುತ್ತಿರುವ ಉಪನ್ಯಾಸಮಾಲೆಗಳನ್ನು ಇಡಿಸಲಾಗುತ್ತಿದೆ. ಒಂದೇ ಊರಿನಲ್ಲಿ ಐದಾರು ದಿನ ಭಾಷಣ ಕಾವ್ಯವಾಚನ ಸಂಗೀತಾದಿಗಳು ಜರುಗುತ್ತವೆ; ಉಪನ್ಯಾಸಗಳು ಸಾಹಿತ್ಯ ವಿಜ್ಞಾನ ಸಮಾಜವೆಲ್ಲಕ್ಕೂ ಸಂಬಂಧಿಸಿರುತ್ತವೆ. ಈ ಸಪ್ತಾಹಗಳು ನೆರವೇರಿದ ದೊಡ್ಡಬಳ್ಳಾಪುರ, ದಾವಣಗೆರೆ, ಕೋಲಾರ ಮುಂತಾದ ಎಲ್ಲ ಕಡೆಗಳಿಂದಲೂ ಅವಕ್ಕೆ ಬಹಳ ಮನ್ನಣೆ ದೊರೆತಿದೆ.

ಈಗ ಅತಿ ಹೊಸದಾದ ಏರ್ಪಾಡಾವುದೆಂದರೆ: ಒಂದೆರಡು ಊರುಗಳನ್ನು ಆರಿಸಿಕೊಂಡು, ಅಲ್ಲಿಗೆ ಒಂದು ವರ್ಷದಲ್ಲಿ ಹಲವು ಬಾರಿ ಹೋಗಿ, ಕೆಲವು ವಿಷಯಗಳಲ್ಲಿ ಒಂದೊಂದನ್ನೂ ಕುರಿತು ನಾಲ್ಕಾರು ಉಪನ್ಯಾಸಗಳನ್ನು ಹೇಳುವ ಯೋಜನೆ. ಅದರಿಂದ ಆ ಊರುಗಳ ಜನರಿಗೆ ಅನಲ್ಪಕಾಲ ಎಡೆಬಿಡದೆ ಜ್ಞಾನಬೋಧೆ ಸಿಕ್ಕುವುದು. ಪ್ರತ್ಯಕ್ಷ ಕೇಳಿ ಉಪಯೋಗ ಪಡೆದ ಸಭಿಕರ ಗುಂಪಿನಿಂದ ಆಚೆಗೂ ಕೂಡ ಈ ಭಾಷಣಮಾಲೆಗಳ ಪ್ರಯೋಜನ ಹರಡಲೆಂಬ ಉದ್ದೇಶದಿಂದ ಅವುಗಳನ್ನು ಈ ರೀತಿ ಚಿಕ್ಕ ಹೊತ್ತಗೆಗಳಾಗಿ ಪ್ರಕಟಿಸಿದೆ.

ನಮ್ಮ ಘನ ಪ್ರಭುಗಳವರು ನಮ್ಮ ವಿಶ್ವವಿದ್ಯಾನಿಲಯಕ್ಕೆ ಎರಡು ಪವಿತ್ರ ಕರ್ತವ್ಯಗಳನ್ನು ನೇಮಿಸಿರುವರಷ್ಟೆ: ಸುಲಭ ಸಮಂಜಸ ಕನ್ನಡದಲ್ಲಿ ರಚಿಸಿದ ಗ್ರಂಥಗಳ ಪ್ರಕಟನೆ; ಜನತೆಯಲ್ಲಿ ಉತ್ತಮ ಬಗೆಯ ಸಂಸ್ಕೃತಿಯ ಪ್ರಸಾರ. ಆ ಎರಡು ಕರ್ತವ್ಯಗಳನ್ನೂ ಈ ಮಾರ್ಗವಾಗಿ ಒಂದೇ ಸಾರಿ ಸಾಧಿಸಬಹುದೆಂಬುದೇ ಹೀಗೆ ಉಪನ್ಯಾಸಗಳನ್ನು ಕೊಟ್ಟು, ಲಘು ಪುಸ್ತಕಗಳನ್ನು ಸಿದ್ಧಮಾಡಿದವರ ನಿರೀಕ್ಷೆ ಮತ್ತು ಹೆಬ್ಬಯಕೆ.

ವಿಶ್ವವಿದ್ಯಾನಿಲಯ, ಮೈಸೂರು,
೨೯—೫—೧೯೩೯.

**ಎನ್. ಎಸ್. ಸುಬ್ಬರಾವ್.**

# ಮುನ್ನುಡಿ

ಕಾಳಿದಾಸನ ಕಾವ್ಯಗಳನ್ನು ಸಾಮಾನ್ಯಜನಕ್ಕೆ ಪರಿಚಯ ಮಾಡಿಕೊಡುವುದೇ ಈ ಸಣ್ಣ ಪುಸ್ತಕದ ಮುಖ್ಯೋದ್ದೇಶ. ಈ ಉದ್ದೇಶವು ನೆರವೇರಲೆಂಬ ದೃಷ್ಟಿಯಿಂದ ಕಾಳಿದಾಸನ ಪ್ರತಿಯೊಂದು ಕಾವ್ಯದ ಕಥಾಭಾಗವನ್ನೂ ಅದರಲ್ಲಿ ಕಂಡು ಬರುವ ಕೆಲವು ವಿಶೇಷ ಲಕ್ಷಣಗಳನ್ನೂ ಪಾತ್ರಗಳ ಸ್ವರೂಪ ವನ್ನೂ ವಿವರಿಸಿ, ವಿಮರ್ಶಾತ್ಮಕವಾದ ಒಂದೆರಡು ಮಾತು ಗಳನ್ನು ಹೇಳಿದೆ. ಕೊನೆಯ ಭಾಗಗಳಲ್ಲಿ ಕಾಳಿದಾಸನ ರಸಪ್ರತಿ ಪಾದನಾಕ್ರಮ, ವರ್ಣನಾಶಕ್ತಿ ಮತ್ತು ಶೈಲಿಯ ವಿಷಯವಾಗಿ ನಾಲ್ಕಾರು ಮಾತುಗಳಿವೆ.

ಈ ಪುಸ್ತಕವನ್ನು ಬರೆಯುವಾಗ ಅನೇಕ ಉಪಯುಕ್ತವಾದ ಸಲಹೆಗಳನ್ನು ಕೊಟ್ಟಿದಕ್ಕೆ ನಾನು ಮ|| ಎಸ್. ವಿ. ರಂಗಣ್ಣ, ಎಂ.ಎ. ಅವರಿಗೆ ಕೃತಜ್ಞನಾಗಿದ್ದೇನೆ. ಮೈಸೂರು ವಿಶ್ವವಿದ್ಯಾ ನಿಲಯದ ಪ್ರಕಟನಶಾಖೆಗಂತೂ ಚಿರಋಣಿ.

ಬೆಂಗಳೂರು,
ತಾ|| ೧೦-೬-೪೦.

ಎಸ್. ರಾಮಚಂದ್ರರಾವ್.

# ವಿಷಯಾನುಕ್ರಮಣಿಕೆ

# ಕಾಳಿದಾಸನ ಕಾವ್ಯಗಳು

## ೧. ಪ್ರವೇಶ

ಕಾಳಿದಾಸನು ಭರತಖಂಡದ ಕವಿಗಳಲ್ಲಿ ಶ್ರೇಷ್ಠನಾದವನೆಂಬುದು ನಿರ್ವಿವಾದವಾದ ವಿಷಯ. ಈತನು ವರಕವಿ, 'ಕವಿಕುಲಗುರು.' ಅನೇಕ ಶತಮಾನಗಳಿಂದಲೂ ಈತನ ಕಾವ್ಯಗಳು ಸಹೃದಯರಿಗೆ ಸಂತೋಷವನ್ನುಂಟುಮಾಡಿವೆ. ಇಷ್ಟಾದರೂ ಈತನ ಕಾಲ ಮತ್ತು ಚರಿತ್ರೆ ನಮಗೆ ಇನ್ನೂ ನಿರ್ದಿಷ್ಟವಾಗಿ ಗೊತ್ತಿಲ್ಲದಿರುವುದು ವಿಷಾದವನ್ನೂ ಆಶ್ಚರ್ಯವನ್ನೂ ಉಂಟುಮಾಡುತ್ತದೆ.

ಈತನು ಕ್ರಿ.ಪೂ. ೧ನೆಯ ಶತಮಾನದಲ್ಲಿದ್ದನೆಂದು ಕೆಲವರೂ, ಕ್ರಿ.ಶ. ೬ನೆಯ ಶತಮಾನದಲ್ಲಿ ಜೀವಿಸಿದ್ದನೆಂದು ಮತ್ತೆ ಕೆಲವರೂ ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಕ್ರಿ.ಶ. ೫ನೆಯ ಶತಮಾನದ ಆದಿಭಾಗದಲ್ಲಿ ಇದ್ದು ಗ್ರಂಥರಚನೆಯನ್ನು ಮಾಡಿದನೆಂಬುದು ಪ್ರಸಿದ್ಧ ವಿದ್ವಾಂಸರುಗಳ ಮತ. ಈತನ ವಿಷಯವಾಗಿ ನಮಗೆ ಹೆಚ್ಚು ತಿಳಿಯದಿದ್ದರೂ, ವಿಕ್ರಮನೆಂಬೊಬ್ಬ ದೊಡ್ಡ ದೊರೆಯ ಆಶ್ರಯಕ್ಕೆ ಒಳಗಾಗಿದ್ದನೆಂಬುದು ಮಾತ್ರ ಸ್ಪಷ್ಟವಾಗಿದೆ.

ಕಾಳಿದಾಸನು ಹತ್ತಾರು ಗ್ರಂಥಗಳನ್ನು ಬರೆದಿದ್ದಾನೆಂಬ ಪ್ರತೀತಿಯಿದ್ದರೂ, ಆತನು ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಶಾಕುಂತಲ—ಎಂಬ ಮೂರು ನಾಟಕಗಳನ್ನೂ, ಋತುಸಂಹಾರ ಮತ್ತು ಮೇಘದೂತ ಎಂಬೆರಡು ಖಂಡ ಕಾವ್ಯಗಳನ್ನೂ, ಕುಮಾರಸಂಭವ ಮತ್ತು ರಘುವಂಶ ಎಂಬ

ಮಹಾಕಾವ್ಯಗಳನ್ನೂ ಮಾತ್ರ ರಚಿಸಿದನೆಂದು ವಿಮರ್ಶಕರ ಅಭಿಪ್ರಾಯ.

ಕಾಳಿದಾಸನು ಅದ್ವಿತೀಯನಾದ ನಾಟಕಕರ್ತೃವೆಂಬುದು ಜಗತ್ಪ್ರಸಿದ್ಧವಾದ ವಿಷಯ. ಹಾಗೆಯೇ ಆತನು ಕಾವ್ಯ ನಿರ್ಮಾಣದಲ್ಲಿಯೂ ಅಸಮಾನನಾದವನು. ಆತನು ತನ್ನ ಕಾವ್ಯಗಳಲ್ಲಿ ತೋರಿರುವ ವಸ್ತುವಿನ್ಯಾಸ, ಪಾತ್ರಸೃಷ್ಟಿ, ಪ್ರತಿಭೆ, ರಸಪ್ರತಿಪಾದನೆ—ಇವು ಆತನ ಕಲಾಕೌಶಲ್ಯವನ್ನು ಸೂಚಿಸುತ್ತವೆ.

---

## ೨. ಋತುಸಂಹಾರ

ಕಾಳಿದಾಸನು ರಚಿಸಿರುವ ಕಾವ್ಯಗಳಲ್ಲಿ 'ಋತುಸಂಹಾರ' ವು ಮೊದಲನೆಯದು. ಇದರಲ್ಲಿ ತಾನು ಕಂಡು ಅನುಭವಿಸಿದ ಋತುಗಳ ಸೌಂದರ್ಯವನ್ನು ವರ್ಣಿಸಿ ಜನರಿಗೆ ಆನಂದವನ್ನುಂಟು ಮಾಡಲು ಕವಿ ಪ್ರಯತ್ನಪಟ್ಟಿದ್ದಾನೆ. ಕಾವ್ಯದಲ್ಲಿ ಭರತ ಖಂಡಕ್ಕೆ ಸಹಜವಾದ ಋತುಗಳ ವರ್ಣನೆಯಿದೆ. ಈ 'ವರ್ಣನಾತ್ಮಕಗೀತೆ' ಯನ್ನು ನಾವು ಎರಡು ದೃಷ್ಟಿಗಳಿಂದ ನೋಡಬಹುದು. ಮೊದಲನೆಯದು ಋತುಗಳ ವರ್ಣನೆ; ಎರಡನೆಯದು ಋತುಗಳು ಪ್ರಣಯಿಗಳ ಮನಸ್ಸಿನ ಮೇಲೆ ಉಂಟುಮಾಡುವ ಪರಿಣಾಮ. ಕಾವ್ಯದ ಮೊದಲನೆಯ ಸರ್ಗದಲ್ಲಿ ಬೇಸಗೆಯ ವರ್ಣನೆಯಿದೆ. ಈ ಋತುವಿನಲ್ಲಿ ಸೂರ್ಯನು 'ಪ್ರಚಂಡ'; ಆದುದರಿಂದ ಚಂದ್ರನನ್ನು ಬಯಸುತ್ತೇವೆ. ಸಂಜೆಯು 'ರಮ್ಯ'

ವಾಗಿರುತ್ತದೆ. ಆಡುವ ' ಜಲಯಂತ್ರ ' ಗಳು ಸುತ್ತುಮುತ್ತ ಲಿನ ವಾತಾವರಣವನ್ನು ತಂಪಾಗಿ ಮಾಡುತ್ತವೆ. ಎಲ್ಲೆಲ್ಲಿಯೂ ' ಸುತಂತ್ರೀಗೀತ ' ಮತ್ತು ' ಸಚಂದನಮಾರುತ.' ' ಪ್ರಚಂಡಾತಪ ' ದಿಂದ ಅತಿಯಾಗಿ ಬಳಲಿದ ಮೃಗಗಳ ನಾಲಗೆಗಳು ಒಣಗಲು, ಅವು ನೀರನ್ನು ಬಯಸಿ ' ವನಾಂತರ ' ವನ್ನು ಪ್ರವೇಶಿಸುವುವು. ಸೂರ್ಯನ ಕಿರಣಗಳಿಂದ ಬೆಂದ ಸರ್ಪಗಳು ನವಿಲಿನ ನೆರಳನ್ನೂ ಸಹ ಪ್ರವೇಶಿಸುತ್ತವೆ. ದಾವಾಗ್ನಿಯು ಅರಣ್ಯಗಳನ್ನು ಸುಟ್ಟು ಬೂದಿಮಾಡುತ್ತದೆ. ಎಲ್ಲೆಲ್ಲಿಯೂ ರೇಷ್ಮೆಯ ಸೀರೆಯನ್ನುಟ್ಟು ಆಭರಣಯುತರಾದ ಸ್ತ್ರೀಯರ ಸಮುದಾಯ !

ಬಿಸಿಲುಗಾಲದನಂತರ ಬರುವ ಮಳೆಗಾಲವು ರಾಜಠೀವಿಯಿಂದ ಶೋಭಿಸುವುದಂತೆ—

> **ಸಶೀಕರಾಂಭೋಧರಮತ್ತಕುಂಜರ**
> **ಸ್ತಡಿತ್ಪತಾಕೋಽಶನಿಶಬ್ದಮರ್ದಲಃ ।**
> **ಸಮಾಗತೋ ರಾಜವದುದ್ಧತದ್ಯುತಿ**
> **ರ್ಘನಾಗಮಃ ಕಾಮಿಜನಪ್ರಿಯಃ ಪ್ರಿಯೇ ॥**

ವರ್ಷರಾಜನು ಮೆರವಣಿಗೆ ಹೊರಡಲು, ಅದರಲ್ಲಿ ಘನವಾದ ಮೇಘಗಳೇ ಮದಿಸಿದಾನೆಗಳು, ಮಿಂಚುಗಳೇ ರಥದ ಬಾವುಟಗಳು, ಗುಡುಗಿನ ಶಬ್ದವೇ ವಾದ್ಯಸಮೂಹ ! ಇಂತಹ ' ಘನಾಗಮ ' ವು ' ಕಾಮಿಜನಪ್ರಿಯ ' ವಂತೆ. ಈ ಋತುವಿನಲ್ಲಿ ಚಾತಕ ಪಕ್ಷಿಗಳು ಜಲಬಿಂದುಗಳನ್ನೇ ಅಂತರಿಕ್ಷದಲ್ಲಿ ಎದುರು ನೋಡುತ್ತವೆ. ಭೂಮಿಯು ಹಸುರು ಬಣ್ಣದಿಂದ ರಂಜಿಸುತ್ತದೆ. ಜಲಭರಿತವಾದ ನದಿಗಳು ರಭಸದಿಂದ ಸಮುದ್ರದೆಡೆಗೆ ನುಗ್ಗುತ್ತವೆ.

ಶರದೃತು, ಹೇಮಂತಋತು, ಶಿಶಿರಋತುಗಳನ್ನು ಮೂರು, ನಾಲ್ಕು, ಐದನೆಯ ಸರ್ಗಗಳಲ್ಲಿ ವರ್ಣಿಸಿ, ಆರನೆಯ ಸರ್ಗದಲ್ಲಿ ಕಾಳಿದಾಸನು ತನಗೆ ಬಹು ಇಷ್ಟವಾದ ವಸಂತಋತುವನ್ನು ವರ್ಣಿಸುತ್ತಾನೆ. ಋತುಗಳಲ್ಲೆಲ್ಲಾ "ಕುಸುಮಾಕರ" ವಲ್ಲವೆ ಶ್ರೇಷ್ಠವಾದುದು? ವಸಂತನು ಯೋಧನಂತೆ ಬರುವನು—

"ಪ್ರಫುಲ್ಲ ಚೂತಾಂಕುರತೀಕ್ಷ್ಣಸಾಯಕೋ
ದ್ವಿರೇಫಮಾಲಾವಿಲಸದ್ಧನುರ್ಗುಣಃ ।
ಮನಾಂಸಿ ಭೇತ್ತುಂ ಸುರತಪ್ರಸಂಗಿನಾಂ
ವಸಂತಯೋದ್ಧಾ ಸಮುಪಾಗತಃ ಪ್ರಿಯೇ ॥"

ಅರಳಿದ ಮಾವಿನ ಮಂಜರಿಯೇ ಈ ವಸಂತಯೋಧನ ಹರಿತವಾದ ಬಾಣವಂತೆ! ಭ್ರಮರಪಂಕ್ತಿಯೇ ಆತನ ಧನುಸ್ಸಿನ ದಾರವಂತೆ! ಪ್ರಣಯಿಗಳ ಮನಸ್ಸನ್ನು ಭೇದಿಸುವುದೇ ವಸಂತಯೋಧನ ಗುರಿಯಂತೆ! ಈ ಋತುವಾದರೋ ಪುಷ್ಪಭರಿತವಾದ ವೃಕ್ಷಗಳಿಂದಲೂ, ಕಮಲಗಳಿಂದ ಕೂಡಿದ ಸರೋವರಗಳಿಂದಲೂ, 'ಸಕಾಮ' ರಾದ ರಮಣಿಯರಿಂದಲೂ, ಸುವಾಸನೆಯುಳ್ಳ ತಂಗಾಳಿಯಿಂದಲೂ, ಸುಖಮಯವಾದ ಸಾಯಂಕಾಲಗಳಿಂದಲೂ, 'ರಮ್ಯ'ವಾದ ದಿನಗಳಿಂದಲೂ ಸರ್ವರನ್ನೂ ಸಂತೋಷಗೊಳಿಸುವುದು. ಸಹಚರಿಯನ್ನು ಕೂಗುವ ಕೋಗಿಲೆ, ರಕ್ತವರ್ಣದ ಅಶೋಕ, ಹಸುರು ಬಣ್ಣದ ಮಾವು, ಚಿಗುರಿದ ಉಪವನಗಳು, ಮನೋಜ್ಞವಾದ ಕುಮುದ ಪುಷ್ಪಗಳು—ಇವು ಮನಸ್ಸನ್ನು ಉಲ್ಲಾಸಗೊಳಿಸುವುವು. ವಸಂತವು 'ಸನ್ಯಾಸಿಗಳ ಮನೋಧೈರ್ಯವನ್ನೂ ಪರೀಕ್ಷಿಸುವ' ಸೊಬಗಿನ ಋತು!

ಈ ರೀತಿಯಾಗಿ ಆರು ಸರ್ಗಗಳಲ್ಲಿ ಆರು ಋತುಗಳನ್ನು ಕವಿ ವರ್ಣಿಸುತ್ತಾನೆ. ಒಟ್ಟಿನಲ್ಲಿ ೧೪೪ ಪದ್ಯಗಳು ವಿವಿಧ

ವೃತ್ತಗಳಲ್ಲಿ ಬರೆಯಲ್ಪಟ್ಟಿವೆ. ಈ "ಪ್ರಣಯದ ಪಂಚಾಂಗ" ವನ್ನು ರಘುವಂಶಾದಿ ಕಾವ್ಯಗಳನ್ನು ಬರೆದ ಕಾಳಿದಾಸನು ಬರೆಯಲಿಲ್ಲವೆಂದು ಹಲವರ ಮತ. ಈ ಅಭಿಪ್ರಾಯಕ್ಕೆ ಕೆಲವು ಕಾರಣಗಳುಂಟು. ಮೊದಲನೆಯದಾಗಿ, ಋತುಸಂಹಾರದ ಶೈಲಿ ಕಾಳಿದಾಸನ ಇತರ ಕಾವ್ಯಗಳ ಶೈಲಿಯ ಅಂತಸ್ತಿಗೇರದಿರುವುದು. ಎರಡನೆಯದಾಗಿ, ಪ್ರಸಿದ್ಧ ವ್ಯಾಖ್ಯಾನಕಾರನಾದ ಮಲ್ಲಿನಾಥನು ಕಾಳಿದಾಸನ ಎಲ್ಲ ಕಾವ್ಯಗಳಿಗೂ ವ್ಯಾಖ್ಯಾನವನ್ನು ರಚಿಸಿ, ಈ ಕಾವ್ಯಕ್ಕೆ ಮಾತ್ರ ರಚಿಸದಿರುವುದು. ಆದರೆ, ಕೇವಲ ಈ ಕಾರಣಗಳಿಂದಲೇ ಋತುಸಂಹಾರವು ಕಾಳಿದಾಸ ಕೃತವಲ್ಲವೆಂದು ಸಾಧಿಸುವುದಕ್ಕಾಗುವುದಿಲ್ಲ. ಕಾವ್ಯವು ಕಾಳಿದಾಸನ ಮೊಟ್ಟಮೊದಲಿನ ಕೃತಿಯಾದುದರಿಂದ ಶೈಲಿ ಅಪಕ್ವವಾಗಿರುವುದು ಸಹಜ. ಅಲ್ಲದೆ ಅವನು ಯುವಕನಾಗಿರುವಾಗಲೇ ಇದನ್ನು ಬರೆದಿರಬಹುದು. ಏಕೆಂದರೆ ಕಾವ್ಯದಲ್ಲಿ ಕಾಮವಾಸನೆ ಹೆಚ್ಚಾಗಿರುವುದು. ಮಲ್ಲಿನಾಥನು ಕಾಳಿದಾಸನ ಮುಖ್ಯ ಕಾವ್ಯಗಳಿಗೆ ಮಾತ್ರ ಗಮನವಿತ್ತನೇ ಹೊರತು, ಅತಿ ಸರಳವಾದ ಈ ಗ್ರಂಥಕ್ಕೆ ವ್ಯಾಖ್ಯಾನಮಾಡಬೇಕೆಂದು ಆತನು ಯೋಚಿಸಲಿಲ್ಲ. 'ಋತುಸಂಹಾರ'ವೂ ಕಾಳಿದಾಸನ ಕೃತಿಯೆಂದು ನಿಸ್ಸಂದೇಹವಾಗಿ ಹೇಳಬಹುದು. ಕಾಳಿದಾಸನು ಹೊಸ ಹೊಸದಾದ ಕಾವ್ಯರೂಪಗಳನ್ನು ಸೃಷ್ಟಿಸಿದನೆಂಬ ಪ್ರಶಸ್ತಿಯನ್ನು ಪಡೆದಿರುವನಷ್ಟೆ; ಇದಕ್ಕೆ 'ಋತುಸಂಹಾರ'ವು ಒಂದು ದೃಷ್ಟಾಂತ. ಇದು ಋತುಗಳ ಸೌಂದರ್ಯವರ್ಣನೆಗಾಗಿ ಮೀಸಲಾಗಿಟ್ಟ ಪ್ರಥಮಕಾವ್ಯ. ಅಂದಮೇಲೆ ಕಾವ್ಯದ ಹೆಸರು ಸೂಚಿಸುವಂತೆ ಕವಿ ಋತುಗಳನ್ನು ಮಾತ್ರ ಶೇಖರಿಸಿ ವರ್ಣಿಸಿಲ್ಲ; ಆದರ ಜೊತೆಗೆ ಪ್ರತಿಯೊಂದು ಋತುವೂ ಪ್ರಣಯಿ

ಗಳ ಚಿತ್ತದಮೇಲೆ ಪರಿಣಾಮವನ್ನು ಉಂಟುಮಾಡುವುದೆಂಬುದನ್ನೂ ತಿಳಿಸಿದ್ದಾನೆ. ಪ್ರಕೃತಿಯ ಸೊಬಗನ್ನೂ ಪ್ರಣಯಿಗಳ ಭಾವವನ್ನೂ ಹಾಸುಹೊಕ್ಕಾಗಿ ಮಾಡಿಕೊಂಡು, ಅಂದವಾದ ಕಾವ್ಯವಸ್ತ್ರವನ್ನು ನೆಯ್ದಿದ್ದಾನೆ. ಆದರೆ ಋತುಗಳ ಸೊಗಸಿಗಿಂತ ಇಲ್ಲಿ ಪ್ರಣಯಿಗಳ ಚಿತ್ರವನ್ನೇ ನಾವು ಹೆಚ್ಚಾಗಿ ಕಾಣುವುದು. ಶೈಲಿಯಲ್ಲಿ ಮಾತು ಹೆಚ್ಚು, ಭಾವ ಕಡಮೆ. ಕವಿಸಮಯಗಳು ಹೇರಳ. ಇಷ್ಟಾದರೂ, ಕಾಳಿದಾಸನ ಬರವಣಿಗೆಯ ಸಾಮಾನ್ಯ ಲಕ್ಷಣಗಳಾದ ಪ್ರಕೃತಿಪ್ರೇಮ, ಅಭಿಪ್ರಾಯಗಳನ್ನು ಬೆಳಗುವ ಉಪಮೆಗಳು, ಕಲ್ಪನಾಶಕ್ತಿಯನ್ನು ತೋರುವ ವರ್ಣನೆ—ಇವೆಲ್ಲವನ್ನೂ ಈ ಪುಟ್ಟ ಕಾವ್ಯದಲ್ಲಿ ಕಾಣುತ್ತೇವೆ.

---

## ೩. ಮೇಘದೂತ

'ಮೇಘದೂತ'ವು ವಿರಹಿಯಾದ ಯಕ್ಷನೊಬ್ಬನ ಮನೋವೃತ್ತಿಯನ್ನು ಚಿತ್ರಿಸುವ ವ್ಯಂಜಕ ಕಾವ್ಯ. ಇದರ ವಸ್ತುವಾದರೂ ವಿಸ್ತಾರವಾದುದಲ್ಲ. ಕುಬೇರನ ಸೇವೆಯಲ್ಲಿದ್ದ ಒಬ್ಬ ಯಕ್ಷನು ಒಂದುಬಾರಿ ಯಾವುದೋ ಅಪರಾಧಮಾಡಲು, ಕೋಪಗೊಂಡ ಕುಬೇರನು ಅವನನ್ನು ಅಲಕಾವತಿಯಿಂದ ಒಂದು ವರುಷಕಾಲ ದೂರವಾಗಿರುವಂತೆ ಆಜ್ಞೆಮಾಡಿದನು. ಯಕ್ಷನು ಅಲಕಾವತಿಯನ್ನು ಬಿಟ್ಟು ವಿಂಧ್ಯಪರ್ವತದ ರಾಮಗಿರಿಯಲ್ಲಿ ವಾಸಮಾಡುತ್ತಿದ್ದನು. ಈ ರೀತಿ ಎಂಟು ತಿಂಗಳ ಕಾಲಕಳೆಯಲು ಒಂದು ದಿನ ಅವನು ಪರ್ವತ ಶಿಖರದ

ಮೇಲಿದ್ದ ಒಂದು ಮೋಡವನ್ನು ಕಂಡನು. ಪತ್ನಿಯನ್ನು ಅಗಲಿದ್ದ ಯಕ್ಷನು "ಕಾಮಾರ್ತ" ನಾಗಿ ಉತ್ತರದಿಕ್ಕಿನೆಡೆಗೆ ಸಂಚರಿಸುತ್ತಿದ್ದ ಆ ಮೋಡವು ಅಲಕಾನಗರಕ್ಕೆ ಹೋಗುವುದೆಂದರಿತು, ಅದರ ಮೂಲಕ ತನ್ನ ಪ್ರೇಯಸಿಗೆ ಸಂದೇಶವೊಂದನ್ನು ಕಳುಹಿಸಲು ಮನಸ್ಸು ಮಾಡಿದನು. ಅಲ್ಲದೆ, ಮೇಘವನ್ನು ಕುರಿತು ತನ್ನ ಸಂದೇಶವನ್ನು ಅಲಕಾನಗರದಲ್ಲಿರುವ ತನ್ನ ಪ್ರಿಯಳಿಗೆ ತಲಪಿಸೆಂದು ವಿನಯದಿಂದ ಪ್ರಾರ್ಥಿಸಿಕೊಳ್ಳುವನು; ಅಲಕಾನಗರಕ್ಕೆ ಹೋಗುವ ಮಾರ್ಗವನ್ನೂ ಸಹ ಮೇಘಕ್ಕೆ ವಿವರಿಸುವನು. ಮೇಘವು ಮೊಟ್ಟಮೊದಲು ಆಮ್ರಕೂಟಪರ್ವತಕ್ಕೆ ಹೋಗಿ, ಅಲ್ಲಿ ಸ್ವಲ್ಪ ವಿಶ್ರಮಿಸಿಕೊಂಡು ವಿಂಧ್ಯೆಯ ಮೇಲೆ ಹಾರಿ, ಅಲ್ಲಿಂದ ಮುಂದುವರಿದು ದಶಾರ್ಣ ದೇಶಕ್ಕೆ ಹೋಗಬೇಕು. ಆ ದೇಶದ ರಾಜಧಾನಿಯಾದ ವಿದಿಶೆಯನ್ನು ಕಂಡು ಮುಂದೆ ತೆರಳಬೇಕು. ಇಲ್ಲಿಂದ ಉಜ್ಜಯಿನಿಯನ್ನು ನೋಡಲೋಸುಗ ನಿರ್ವಿಂಧ್ಯಾ ನದಿಯನ್ನು ದಾಟಬೇಕಾಗುವುದು. ಏಕೆಂದರೆ ಉಜ್ಜಯಿನಿಯು ಭೂಮಿಯ ಸ್ವರ್ಗವಲ್ಲವೆ? ಇಂತಹ ಪಟ್ಟಣವನ್ನು ನೋಡದೆ ತೆರಳುವುದೆಂತು? ಇಲ್ಲಿಯ ಶಿವಾಲಯವನ್ನು ನೋಡಿಕೊಂಡು, ಗಂಭೀರಾನದಿಯನ್ನು ದಾಟಿ, ಸ್ಕಂದನ ನಿವಾಸವಾದ ದೇವಗಿರಿಯನ್ನು ಸೇರಿ, ಮುಂದೆ ಚರ್ಮಣ್ವತೀ ನದಿಯಾಚೆಯಿರುವ ದಶಪುರವನ್ನು ಸೇರಬೇಕು. ಅನಂತರ ಯುದ್ಧರಂಗವಾದ ಕುರುಕ್ಷೇತ್ರವನ್ನು ನೋಡಿ, ಸರಸ್ವತೀ ಪವಿತ್ರತೀರ್ಥವನ್ನು ರುಚಿಸಿ, ಗಂಗಾನದಿಯನ್ನು ಸಮೀಪಿಸಿ ಅಲ್ಲಿಂದ ಶಿವನ ಆವಾಸಭೂಮಿಯಾದ ಹಿಮಾಲಯದಲ್ಲಿರುವ ಕೈಲಾಸಕ್ಕೆ ಹೋಗಬೇಕು. ಕೈಲಾಸದ ಅಗ್ರಭಾಗದಲ್ಲಿರುವುದೇ

ಅಲಕಾನಗರ. ಈ ಸುಂದರನಗರದಲ್ಲಿ ಕುಬೇರನ ಅರಮನೆಯ ಉತ್ತರದಿಕ್ಕಿನಲ್ಲಿ ಯಕ್ಷನ ಮನೆಯಿದೆ. ರಮ್ಯವಾದ ಈ ಮನೆಯಲ್ಲಿ ವಿರಹಪೀಡಿತಳಾದ, ಖಿನ್ನಮುಖಿಯಾದ ಯಕ್ಷನ ಪತ್ನಿಯನ್ನು ಮೋಡವು ಕಂಡು, ಆಕೆಗೆ ಯಕ್ಷನು ಕಳುಹಿಸಿದ ಸಂದೇಶ ವಾಕ್ಯವನ್ನು ತಲಪಿಸಬೇಕು. ಯಕ್ಷನು ಪತ್ನಿಯನ್ನು ಕಾಣಲು ಬಹು ಕಾತರನಾಗಿರುವನೆಂದೂ, ಪತಿಯ ಆಗಮನ ವಿಷಯದಲ್ಲಿ ನಿರಾಶಳಾಗಬಾರದೆಂದೂ, ಮಳೆಗಾಲ ಮುಗಿದೊಡನೆಯೇ ಪ್ರವಾಸದ ಅವಧಿಯು ಮುಗಿದುಹೋಗುವುದೆಂದೂ, ಆದುದರಿಂದ ನಾಲ್ಕು ತಿಂಗಳುಕಾಲ ಮಾತ್ರ ಆಕೆಯು ಪತಿಯ ಅಗಲಿಕೆಯನ್ನು ಸಹಿಸಬೇಕೆಂದೂ ಮೇಘವು ಯಕ್ಷಪತ್ನಿಗೆ ಸಮಾಧಾನ ಹೇಳಬೇಕು. ಇದಾದ ಬಳಿಕ, ಯಕ್ಷಪತ್ನಿಯು ಪ್ರತಿಯಾಗಿ ಕಳುಹಿಸುವ ಸಮಾಧಾನ ವಾರ್ತೆಯನ್ನು ಮೇಘವು ತನಗೆ ತಲಪಿಸಬೇಕು. ಇದೇ 'ಮೇಘಸಂದೇಶ' ದ ವಸ್ತು.

'ಮೇಘದೂತ' ವು ಪೂರ್ವಮೇಘವೆಂದೂ, ಉತ್ತರಮೇಘವೆಂದೂ ಎರಡು ಭಾಗವುಳ್ಳ ಕಾವ್ಯ. ಒಟ್ಟು ಇದರಲ್ಲಿ ೧೧೫ ಮಂದಾಕ್ರಾಂತವೃತ್ತದಲ್ಲಿ ಬರೆದಿರುವ ಪದ್ಯಗಳಿವೆ. ಕೆಲವು ಪದ್ಯಗಳನ್ನು ಇತರರು ರಚಿಸಿ ಕಾವ್ಯದಲ್ಲಿ ಸೇರಿಸಿರುವರೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದರೂ ಒಟ್ಟಿನಲ್ಲಿ ಕಾವ್ಯವು ಶುದ್ಧರೂಪದಲ್ಲಿಯೇ ನಮಗೆ ದೊರೆತಿದೆ. ಪೂರ್ವಮೇಘವನ್ನು ವರ್ಣನಾಗೀತವೆಂದೂ ಉತ್ತರಮೇಘವನ್ನು ಉತ್ಕಂಠಾಗೀತವೆಂದೂ ಕರೆಯಬಹುದು. ಪೂರ್ವಮೇಘದಲ್ಲಿ ಉತ್ತರದೇಶದ ಪ್ರಾಚೀನ ಕಾಲದ ನಗರಗಳೂ, ನದಿಗಳೂ, ಬೆಟ್ಟಗಳೂ ವರ್ಣಿತವಾಗಿವೆ. ಅಲಕಾನಗರದ ವರ್ಣನೆಯೂ, ಅಲ್ಲಿದ್ದ

ಯಕ್ಷನ ಸುಂದರ ಭವನದ ವರ್ಣನೆಯೂ ಯಕ್ಷನು ಮೇಘ ದೊಡನೆ ಸತಿಗೆ ಕಳುಹಿಸಿದ ಸಂದೇಶವೂ ಉತ್ತರ ಮೇಘದವಸ್ತು.

ಕೆಲವರು ಕಾಳಿದಾಸನು ತನ್ನ ಆತ್ಮಕತೆಯ ಒಂದಂಶವನ್ನು ಈ ಕಾವ್ಯದಲ್ಲಿ ನಿರೂಪಿಸಿರುವನೆಂದು ಹೇಳುತ್ತಾರೆ. ವಿಕ್ರಮಾದಿತ್ಯನ ಸಭೆಯಲ್ಲಿ ಒಂದು ದಿನ ಕಾಳಿದಾಸನು ಒಂದು ತಪ್ಪು ಮಾಡಿದುದರಿಂದ, ರಾಜನು ಕುಪಿತನಾಗಿ ಕಾಳಿದಾಸನನ್ನು ಒಂದು ವರುಷಕಾಲ ಪ್ರವಾಸಮಾಡುವಂತೆ ಆಜ್ಞೆಮಾಡಿದ ನೆಂಬ ಕತೆಯಿದೆ. ಆದರೆ ಈ ಕತೆಯನ್ನು ನಂಬಿ 'ಮೇಘ ದೂತ'ವು ಕಾಳಿದಾಸನ ಆತ್ಮಕಥಾವೃತ್ತಾಂತವೆಂದು ಹೇಳಲು ಸಾಕಾದಷ್ಟು ಆಧಾರಗಳಿಲ್ಲ.

'ರಘುವಂಶ'ವನ್ನು ಬರೆದನಂತರ ಈ ಕಾವ್ಯವನ್ನು ಕಾಳಿ ದಾಸನು ಬರೆದನೆಂದೂ ಊಹಿಸಬಹುದು. ಏಕೆಂದರೆ, ರಘು ವಂಶದ ಹದಿಮೂರನೆಯ ಸರ್ಗದಲ್ಲಿ, ಲಂಕೆಯಿಂದ ಪುಷ್ಪಕ ವಿಮಾನವನ್ನೇರಿ ರಾಮನು ಸೀತೆಯೊಡನೆ ಅಯೋಧ್ಯಾಭಿ ಮುಖನಾಗಿ ಹೊರಟನೆಂದೂ, ಆಗ ದಾರಿಯಲ್ಲಿ ತಾನು ಕಂಡ ಹಲವು ಸೊಬಗಿನ ದೃಶ್ಯಗಳನ್ನು ಸೀತೆಗೆ ವರ್ಣಿಸಿದನೆಂದೂ ಉಕ್ತವಾಗಿದೆಯಷ್ಟೆ. ಈ ಸನ್ನಿವೇಶವನ್ನು ಚಿತ್ರಿಸುತ್ತಿದ್ದಾಗ ಕಾಳಿದಾಸನಿಗೆ ತಾನು ಕಣ್ಣಾರೆ ಕಂಡ ನಗರಗಳನ್ನು ಬೇರೊಂದು ಕಾವ್ಯದಲ್ಲಿ ವರ್ಣಿಸಬೇಕೆಂಬ ಆಸೆ ತಲೆದೋರಿರಬಹುದು. ಮೇಘದೂತದ ಪೂರ್ವ ಭಾಗವೇ ಇದಕ್ಕೆ ಸಾಕ್ಷಿ. ಇದಲ್ಲದೆ ದೂತನೊಬ್ಬನೊಡನೆ ಸಂದೇಶ ಕಳುಹಿಸುವ ಅಭಿಪ್ರಾಯವನ್ನು ಇವನು ರಾಮಾಯಣದಿಂದ ಹೊಂದಿರಬಹುದು. ಮಲ್ಲಿನಾಥನು ಮೊದಲನೆಯ ಪದ್ಯವನ್ನು ವ್ಯಾಖ್ಯಾನ ಮಾಡುವಾಗ "ಸೀತಾಂ ಪ್ರತಿ ರಾಮಸ್ಯ ಹನೂಮತ್ಸಂದೇಶಂ ಮನಸಿ ನಿಧಾಯ ಮೇಘ

ಸಂದೇಶಂ ಕವಿಃ ಕೃತವಾನಿತ್ಯಾಹುಃ" ಎಂಬುದಾಗಿ ಬರೆದಿರುವನು. ಆದರೆ, ಒಂದು ಅಭಿಪ್ರಾಯವನ್ನು ರಾಮಾಯಣದಂತಹ ಉದ್ದಾಮ ಕಾವ್ಯದಿಂದ ತೆಗೆದುಕೊಂಡಮಾತ್ರಕ್ಕೆ ಕಾಳಿದಾಸನ ಮಹತ್ತಿಗೆ ಕುಂದುಬರುವುದಿಲ್ಲ. ಇತರ ಕಾವ್ಯದಿಂದ ಬಂದ ಸೂಚನೆಯನ್ನು ತನ್ನ ಅಪೂರ್ವಶಕ್ತಿಯಿಂದ ಬೆಳೆಯಿಸಿ, ಹೊಸ ಕಟ್ಟನ್ನು ಕಟ್ಟಿ, ಇದು ತನ್ನಲ್ಲಿ ಹುಟ್ಟಿದ ಭಾವನೆಯೋ ಏನೋ ಎಂಬಂತೆ ಕವಿಮಾಡಿರುವುದು ಶ್ಲಾಘನೀಯವಾಗಿದೆ.

ಕಾಳಿದಾಸನು ಯಕ್ಷಯಕ್ಷಿಣಿಯರ ವಿರಹವನ್ನು ಚಿತ್ರಿಸಿರುವುದರಲ್ಲಿ ಔಚಿತ್ಯವಿದೆ. ಯಕ್ಷನ ಬದಲು ಮಾನವನೊಬ್ಬನನ್ನು ಆರಿಸಿಕೊಂಡಿದ್ದಲ್ಲಿ ವಿವರಿಸಿರುವ ವಿರಹ ಭಾವಕ್ಕೆ ಈಗಿರುವ ತೀವ್ರತೆ ಬರುತ್ತಿರಲಿಲ್ಲ. ಯಕ್ಷರು ಧನಿಕರು. ಸುಖಾನುಭವವೇ ಅವರ ಜೀವನದ ತತ್ವ; ಕಷ್ಟಕ್ಕೆ ಅಪರಿಚಿತರು. ಅವರಲ್ಲಿ 'ನಯನಸಲಿಲ' ಕಂಡರೆ ಅದು 'ಆನಂದೋತ್ಥ'ವಾದುದು; ಕುಸುಮಶರನಿಂದುಂಟಾದ ತಾಪವನ್ನು ಬಿಟ್ಟು ಮಿಕ್ಕ ತಾಪವನ್ನು ಅರಿಯರು. ಅವರು ಯೌವನವನ್ನು ಬಿಟ್ಟು ಮಿಕ್ಕ ಯಾವ ದಶೆಯನ್ನೂ ಕಾಣರು. ಇಂತಹ ಪಂಗಡದವರಲ್ಲಿ ಒಬ್ಬನಾದ ಯಕ್ಷನಿಗೆ ಪ್ರಿಯೆಯನ್ನು ಬಿಡುವ ಸಂದರ್ಭವೊದಗಿದರೆ ಅವನಿಗೆ ಸಿಡಿಲುಬಿದ್ದಂತಾಗುವುದು. ಇದನ್ನರಿತೇ ಕುಬೇರನೂ ಸಹ, ಯಕ್ಷನ ಅಪರಾಧ ಶಿಕ್ಷೆಗಾಗಿ ಅವನಿಗೆ ವಿರಹ ಶಾಪವನ್ನು ವಿಧಿಸಿದುದು.

'ವಿಕ್ರಮೋರ್ವಶೀಯದಲ್ಲಿ' ಊರ್ವಶಿಯನ್ನಗಲಿ ಪರಿತಪಿಸುವ ಪುರೂರವನ ಶೋಕಮಯ ಚಿತ್ರವನ್ನು ಕಂಡರೆ, ಮೇಘಸಂದೇಶದಲ್ಲಿ ಪತಿವಿರಹದಿಂದುಂಟಾದ ದುಃಖವನ್ನು ಅನುಭವಿಸುವ ಯಕ್ಷಿಣಿಯ ಚಿತ್ರವನ್ನು ಕಾಣುತ್ತೇವೆ. ಕಾವ್ಯದಲ್ಲಿ

ಚಿತ್ರಿತವಾಗಿರುವುದು ಅನ್ಯಾದೃಶವಾದ ವಿಪ್ರಲಂಭಶೃಂಗಾರ. ಭವಭೂತಿಯನ್ನು ಬಿಟ್ಟು ಬೇರೆ ಯಾವ ಕವಿಯೂ ಇಷ್ಟು ಮನಕರಗಿಸುವ ವಿಪ್ರಲಂಭವನ್ನು ಹಾಡಿಲ್ಲ. ಸಂಭೋಗದ ಸ್ವಾರ್ಥವಾದ ಮತ್ತು ಗಾಢವಾದ ಅಂಧಪ್ರೇಮವು ವಿಪ್ರಲಂಭಾಗ್ನಿಯಲ್ಲಿ ಬೆಂದಮೇಲೆ ಪುಟಕ್ಕೆ ಹಾಕಿದ ಹೊನ್ನಿನಂತೆ ಅಸ್ವಾರ್ಥವೂ ಪವಿತ್ರವೂ ಆಗಿ ಪರಿಣಮಿಸುವುದಲ್ಲವೆ. ಕಾಳಿದಾಸನು ಮೊಟ್ಟಮೊದಲಿನ ಪದ್ಯದಲ್ಲಿಯೇ 'ಜನಕತನಯಾಸ್ನಾನಪುಣ್ಯೋದಕೇಷು' 'ರಾಮಗಿರ್ಯಾಶ್ರಮೇಷು' ಎಂಬ ವಾಕ್ಯಾಂಶಗಳಲ್ಲಿ ಸೀತಾರಾಮರ ಪವಿತ್ರ ಚರಿತ್ರೆಯನ್ನು ಜ್ಞಾಪಿಸಿ ಕಾವ್ಯದಲ್ಲಿ ವಿವರಿಸಲ್ಪಟ್ಟ ಪ್ರೇಮವು ಶುದ್ಧವೂ ಉನ್ನತವೂ ಆದುದೆಂದು ಸೂಚಿಸಿದ್ದಾನೆ. ಯಕ್ಷನು ಕಳುಹಿಸುವ ಸಂದೇಶವಾದರೂ ಎಷ್ಟು ಸುಂದರ ಮತ್ತು ಸರಳ! ಅದು ಅವನ ಹೃದಯಪರಿತಾಪವನ್ನು ಹೊರಸೂಸುವುದು. ಆದರೆ, ಒಂದು ವರುಷ ಮಾತ್ರ ಯಕ್ಷನು ಪತ್ನಿಯನ್ನು ಅಗಲುವ ಪ್ರಸಂಗ ಒದಗಿದುದರಿಂದ ಆತನು ತೀವ್ರ ವ್ಯಥೆಪಡುವುದು ಅಸ್ವಾಭಾವಿಕವೆಂಬುದು ಹಲವರ ಅಭಿಪ್ರಾಯ. ಇದು ನಿಜ. ಆದರೆ, ಯಕ್ಷಯಕ್ಷಿಣಿಯರ ಪ್ರೇಮದ ಗಾಢತೆಯನ್ನು ಸೂಚಿಸುವುದಕ್ಕಾಗಿ ಕವಿ ಈ ರೀತಿಯಾದ ಶೋಕವನ್ನು ಸೂಚಿಸಿರುವನೆಂಬುದನ್ನು ಮರೆಯಬಾರದು.

ಪಾಶ್ಚಾತ್ಯ ವಿದ್ವಾಂಸರೊಬ್ಬರು 'ಮೇಘದೂತ' ವನ್ನು ನೋಡಿ "ಜಗತ್ತಿನಲ್ಲೆಲ್ಲಾ ವಿಸ್ಮಯಕರವಾದ ಪ್ರಣಯಗೀತೆ ಇದೊಂದೇ" ಎಂಬುದಾಗಿ ಸಾರಿದ್ದಾರೆ. ಶಾಕುಂತಲದಂತೆ ಇದೊಂದು "ಕುಂದಿಲ್ಲದಂತೆ ಕೆತ್ತಲ್ಪಟ್ಟ ಸುಂದರ ಕಲಾಮೂರ್ತಿ". ಮೇಘವನ್ನೇ ದೂತನನ್ನಾಗಿ ಮಾಡಿರುವ ಕಾಳಿ

ದಾಸನ ಭಾವನೆಯಲ್ಲಿ ನವೀನತೆಯಿದೆ, ಕಲ್ಪನೆಯಲ್ಲಿ ರಮ್ಯತೆಯಿದೆ, ಮತ್ತು ಉಪಯೋಗಿಸಿರುವ ಶೈಲಿಯಲ್ಲಿ ಮಾಧುರ್ಯವಿದೆ. ಸಂದೇಶಕಾವ್ಯ ಸಾಹಿತ್ಯದ ಪ್ರಾರಂಭೋತ್ಸವವನ್ನು ಮಾಡಿದ ಕವಿ ಕಾಳಿದಾಸ; ಮೇಘದೂತವೇ ಮೊಟ್ಟಮೊದಲಿನ ಸಂದೇಶಕಾವ್ಯ. ಇದು ಎಷ್ಟು ಜನಪ್ರಿಯವಾದ ಸಾಹಿತ್ಯರೂಪವೆಂಬುದು ಮೇಘದೂತದ ಅನೇಕ ಅನುಕರಣಗಳಿಂದ ಸ್ಪಷ್ಟವಾಗುತ್ತದೆ. ಇದನ್ನೇ ಮೇಲ್ಪಂಕ್ತಿಯಾಗಿಟ್ಟುಕೊಂಡು 'ಪವನದೂತ' 'ನೇಮಿದೂತ' 'ಉದ್ಧವದೂತ' 'ಹಂಸದೂತ' ಎಂಬ ಸಂದೇಶ ಕಾವ್ಯಗಳು ರಚಿಸಲ್ಪಟ್ಟವು. ಜರ್ಮನಿಯ ಷಿಲ್ಲರ್ ಎಂಬ ಪ್ರಸಿದ್ಧ ಕವಿ ತನ್ನ ಒಂದು ಕಾವ್ಯದಲ್ಲಿ ಮೇಘವನ್ನು ದೂತನೆಂದು ಭಾವಿಸಿಕೊಂಡು ಕಾವ್ಯ ಬರೆದಿರುವನಂತೆ. ಇದು ಕಾಳಿದಾಸನ ಕಲ್ಪನಾಶಕ್ತಿಗೆ ಸಲ್ಲತಕ್ಕ ಬಹು ಗೌರವದ ಕಾಣಿಕೆ. ಋತುಸಂಹಾರದಂತೆ ಇಲ್ಲಿಯೂ ಕವಿ ಪ್ರಕೃತಿ ವರ್ಣನೆಯನ್ನೂ ಪ್ರಣಯಿಗಳ ಹೃದಯಸ್ಥಿತಿಯನ್ನೂ ಒಟ್ಟುಗೂಡಿಸಿದ್ದಾನೆ. ಆದರೆ, ಋತುಸಂಹಾರದಲ್ಲಿ ಕಾಳಿದಾಸನು ಸಿದ್ಧಿಯನ್ನು ಪಡೆಯಲಿಲ್ಲ. ಇಲ್ಲಿ ಸಂಪೂರ್ಣ ಸಿದ್ಧಿಯನ್ನು ಪಡೆದಿದ್ದಾನೆ. ಅಲ್ಲದೆ, ಮೇಘದೂತದ ಶೈಲಿ ನಯದ ಚರಮವನ್ನಡರಿದೆ. ಭಾವಕ್ಕೆ ತಕ್ಕುದಾದ ಮಂದಾಕ್ರಾಂತವೃತ್ತವನ್ನವಲಂಬಿಸಿರುವುದರಿಂದ ಈ ವೃತ್ತದ ಮಂದಗಮನವೂ ರಾಜಠೀವಿಯೂ ವಾಚಕರ ಮನಸ್ಸನ್ನು ಅಪಹರಿಸುತ್ತದೆ. ಒಂದು ಮಾತಿನಲ್ಲಿ ವರ್ಣಿಸಬಹುದಾದರೆ ಮೇಘದೂತವನ್ನು "ಗೀತಿಕಾರತ್ನ" ವೆನ್ನಬಹುದು.

---

# ೪. ಕುಮಾರಸಂಭವ

'ಕುಮಾರಸಂಭವ' ಮತ್ತು 'ರಘುವಂಶ' ಗಳನ್ನು ಲಘುಪುರಾಣಗಳೆಂದು ಕರೆಯುಬಹುದು. ಏಕೆಂದರೆ, ಈ ಖ್ಯಾತಿಯನ್ನು ಪಡೆದ ಮಹಾಕಾವ್ಯಗಳಲ್ಲಿ, ಪುರಾಣ ಗ್ರಂಥ ಗಳಲ್ಲಿ ಕಂಡುಬರುವಂತೆ, ಯುದ್ಧಗಳ ಮತ್ತು ಮಹಾಪಾತ್ರಗಳ ವಿವರಣೆಯೂ ನಿರೂಪಣೆಯೂ ಕಂಡುಬರುವುವು. ಆದರೆ, ಪುರಾಣಗಳಷ್ಟು ಇವು ಆಕಾರದಲ್ಲಿ ವಿಸ್ತಾರವಾದುವುಗಳಲ್ಲ, ಶೈಲಿಯಲ್ಲಿ ಸರಳವೂ ಅಲ್ಲ. ಆದುದರಿಂದಲೇ ಇವುಗಳನ್ನು 'ಅಲಂಕೃತ ಲಘುಪುರಾಣ'ಗಳೆನ್ನಬಹುದು. ಇವುಗಳ ವಸ್ತುವೂ ಪುರಾಣಗಳಿಂದಲೇ ಆರಿಸಲ್ಪಟ್ಟಿವೆ. ಇವುಗಳ ಚೆಲುವು ಕಥೆ ಗಿಂತಲೂ ಕಥೆ ಹೇಳುವ ರೀತಿಯಲ್ಲಿದೆಯಾದುದರಿಂದ ವಸ್ತುವಿ ಗಿಂತಲೂ ರೀತಿ ಇವುಗಳಲ್ಲಿ ಪ್ರಾಧಾನ್ಯವಾದುದು.

ಜಗತ್ತಿಗೆ ಮಾತಾಪಿತೃಗಳಾದ ಪಾರ್ವತೀಪರಮೇಶ್ವರರ ದಾಂಪತ್ಯವನ್ನು ವರ್ಣಿಸುವ ಕಾವ್ಯವೇ "ಕುಮಾರಸಂಭವ." ಈ ಪವಿತ್ರ ದಾಂಪತ್ಯದ ಫಲವಾದ ಕುಮಾರನ ಜನನವೂ ಆತನ ಸಾಹಸವೂ ಕಾವ್ಯದಲ್ಲಿ ಚಿತ್ರಿಸಲ್ಪಟ್ಟಿವೆ. ಉತ್ತರದಿಕ್ಕಿನಲ್ಲಿ ದೇವತಾತ್ಮನಾದ ಹಿಮಾಲಯನೆಂಬ ಪರ್ವತರಾಜನಿದ್ದನು. ಈತನಿಗೆ ಪಾರ್ವತಿಯೆಂಬ ಮಗಳು ಜನಿಸಿದಳು. ಚಿತ್ರಗಾರನ ಶಲಾಕೆಯಿಂದ ಚಿತ್ರಪಟವು ಉತ್ಪನ್ನವಾಗುವಂತೆಯೂ ಸೂರ್ಯನ ಕಿರಣಗಳಿಂದ ಕಮಲವು ಅರಳುವಂತೆಯೂ ಕ್ರಮೇಣ ಪಾರ್ವ ತಿಯ ಶರೀರದಿಂದ ನವಯೌವನವು ಅಭಿವ್ಯಕ್ತವಾಯಿತು:

> ಉನ್ಮೀಲಿತಂ ತೂಲಿಕಯೇವ ಚಿತ್ರಂ
> ಸೂರ್ಯಾಂಶುಭಿರ್ಭಿನ್ನಮಿವಾರವಿಂದಮ್ ।

ಬಭೂವ ತಸ್ಯಾಶ್ಚತುರಸ್ರಶೋಭಿ
ವಪುರ್ವಿಭಕ್ತಂ ನವಯೌವನೇನ ॥
ಕುಮಾ. ೧-೩೨

ಹೀಗಿರಲು ಒಂದುದಿನ "ಕಾಮಚರ"ನಾದ ನಾರದನು ಪರ್ವತ ರಾಜನಲ್ಲಿಗೆ ಬಂದು, ರಾಜನ ಪಾರ್ಶ್ವದಲ್ಲಿ ನಿಂತಿದ್ದ ಉಮೆಯನ್ನು ಕಂಡು, ಆಕೆಯು ಹರನ ಅರ್ಧಾಂಗಿಯಾಗುವಳೆಂದು ನುಡಿದನು-

ಸಮಾದಿದೇಶೈಕವಧೂಂ ಭವಿತ್ರೀಂ
ಪ್ರೇಮ್ಣಾ ಶರೀರಾರ್ಧಹರಾಂ ಹರಸ್ಯ ।
ಕುಮಾ. ೧-೫೦

ಅದುಮೊದಲು ಈಶ್ವರನೇ ತನ್ನ ಅಳಿಯನೆಂದು ತಿಳಿದು ಹಿಮಾಲಯನು ಹಿಗ್ಗುತ್ತಿದ್ದನು. ಅಲ್ಲದೆ ಹಿಮಾಲಯಪರ್ವತದ ಮೇಲೆ ಉಗ್ರತಪಸ್ಸಿನಲ್ಲಿ ನಿರತನಾದ ಶಿವನನ್ನು ಸೇವಿಸೆಂದು ಹಿಮಾಲಯನು ಮಗಳಾದ ಪಾರ್ವತಿಗೆ ಅನುಮತಿಯಿತ್ತನು. ಪಾರ್ವತಿಯು ಬಹು ಭಕ್ತಿಯಿಂದ ಶಿವನನ್ನು ಸೇವಿಸುತ್ತಿದ್ದಳು. ತಪೋಮಗ್ನನಾದ ಶಿವನು ಮಾತ್ರ ಉಮೆಯನ್ನು ಕಣ್ಣೆತ್ತಿಯೂ ನೋಡಲಿಲ್ಲ.

ಹೀಗಿರಲಾಗಿ ತಾರಕಾಸುರನಿಂದ ಹಿಂಸಿಸಲ್ಪಟ್ಟ ದೇವತೆಗಳು, ಇಂದ್ರನನ್ನು ಮುಂದೆಮಾಡಿಕೊಂಡು ಬ್ರಹ್ಮನಲ್ಲಿಗೆ ಹೋದರು. ದೇವತೆಗಳು ತಾರಕಾಸುರನಿಂದ ಪಡುತ್ತಿರುವ ತೊಂದರೆಯನ್ನು ಬ್ರಹ್ಮನಿಗೆ ಬೃಹಸ್ಪತಿ ವಿವರಿಸಿ, ತಾರಕಾಸುರನನ್ನು ಕೊಲ್ಲಲು ಸಾಮರ್ಥ್ಯವುಳ್ಳ ಮತ್ತು ದೇವತೆಗಳ ಸೇನೆಯನ್ನು ವಿಜಯಕ್ಕೆ ಒಯ್ಯಬಲ್ಲ ಒಬ್ಬ ಸೇನಾಧಿಪನನ್ನು ಕರುಣಿಸಬೇಕಾಗಿ ಪ್ರಾರ್ಥಿಸಿದನು. ಬ್ರಹ್ಮನು ಅವರ ಪ್ರಾರ್ಥನೆಯನ್ನು ಕೇಳಿ, ತಪೋಮಗ್ನನಾಗಿರುವ ಶಿವನು ಪಾರ್ವತಿಯನ್ನು ಲಗ್ನವಾಗುವಂತೆ

ಮಾಡಬೇಕೆಂದೂ, ಅವರಲ್ಲಿ ಜನಿಸುವ ಕುಮಾರನು ತಾರಕಾ ಸುರನನ್ನು ಕೊಲ್ಲುವ ಸಾಮರ್ಥ್ಯವುಳ್ಳವನಾಗುವನೆಂದೂ ಅವರಿಗೆ ಹೇಳಿ ಕಳುಹಿಸಿದನು.

ಪಾರ್ವತಿಯನ್ನು ಶಿವನಿಗೆ ಮದುವೆಮಾಡಿಸುವ ಭಾರವು ದೇವತೆಗಳದಾಯಿತು. ಇದಕ್ಕಾಗಿ ದೇವೇಂದ್ರನು ಮನ್ಮಥನನ್ನು ಕರೆದು, ಆತನ ಸಹಾಯವನ್ನು ಕೋರಿದನು. ಮನ್ಮಥನು ಸಖನಾದ ವಸಂತನೊಡನೆಯೂ ಪತ್ನಿಯಾದ ರತಿಯೊಡನೆಯೂ ಶಿವನಿದ್ದೆಡೆಗೆ ಬಂದು, ಶಿವನ ಮನಸೆಳೆಯುವ ಉದ್ದೇಶದಿಂದ ಅಲ್ಲಿ ವಸಂತಋತುವಿನ ಲಕ್ಷಣಗಳನ್ನೇರ್ಪಡಿಸಿದನು. ಅದೇಕಾಲದಲ್ಲಿ ಪಾರ್ವತಿ ಅಲ್ಲಿಗೆ ಎಂದಿನಂತೆ ಶಿವನನ್ನು ಪೂಜಿಸಲು ಬಂದಳು. ಶಿವನೂ ಆಗ ತನ್ನ ಸಮಾಧಿಯಿಂದೆಚ್ಚತ್ತು ಪಾರ್ವತಿಯ ಪೂಜೆಯನ್ನು ಸ್ವೀಕರಿಸಿ “ ಅನನ್ಯಭಾಜಂ ಪತಿಮಾಪ್ನುಹಿ ” * ಎಂಬುದಾಗಿ ಆಕೆಯನ್ನು ಆಶೀರ್ವದಿಸಿದನು. ಇಂತಹ ಸಮಯದಲ್ಲಿ ಮನ್ಮಥನು ತನ್ನ ಅಸ್ತ್ರವನ್ನು ಶಿವನ ಮೇಲೆ ಬಿಡಲು ಸಿದ್ಧನಾದನು. ಶಿವನ ದೃಷ್ಟಿ ಪಾರ್ವತಿಯ ಮೇಲೆ ಬಿತ್ತು ; ಚಿತ್ತ ಕಲಕಿದಂತಾಯಿತು. ಈ ರೀತಿಯಾದ ತನ್ನ ಚಿತ್ತಕ್ಷೋಭೆಗೆ ಕಾರಣವೇನೆಂಬುದನ್ನು ಅರಿಯಲು ಶಿವನು ಸುತ್ತಲೂ ದೃಷ್ಟಿಬೀರಲು ಮನ್ಮಥನು ಕಣ್ಣಿಗೆ ಬಿದ್ದನು. ಕೂಡಲೇ ಕ್ರೋಧಾವೃತನಾಗಿ ತನ್ನ ನೇತ್ರಾಗ್ನಿಯಿಂದ ಮನ್ಮಥನನ್ನು ಸುಟ್ಟನು. ಉಮೆಯಾದರೋ ಇದೆಲ್ಲವನ್ನೂ ಕಂಡು, ಖಿನ್ನಮನಸ್ಕಳಾಗಿ ಮನೆಗೆ ಹಿಂದಿರುಗಿದಳು. ಅತ್ತ ಪತಿಗಾದ ಗತಿಯನ್ನು ಕಂಡು ರತಿ ಶೋಕಸಾಗರದಲ್ಲಿ ಮುಳುಗಿಹೋದಳು.

* ಬೇರೊಬ್ಬಳನ್ನು ಭಜಿಸದ ಗಂಡನನ್ನು ಪಡೆ.

ಇತ್ತ ಪಾರ್ವತಿ ಮನ್ಮಥದಹನವನ್ನು ಕಣ್ಣಾರೆ ಕಂಡು, ಶಿವನನ್ನು ಒಲಿಸಿಕೊಳ್ಳುವುದರಲ್ಲಿ ತನ್ನ ರೂಪಲಾವಣ್ಯವು ಸಹಾಯಮಾಡಲಾರದೆಂದು ಅರಿತು ರೂಪವನ್ನು ನಿಂದಿಸ ತೊಡಗಿದಳು. ಅಲ್ಲದೆ ಶಿವನನ್ನು ಕುರಿತು ತಪಸ್ಸುಮಾಡಿ ಆತ ನನ್ನು ಒಲಿಸಿಕೊಳ್ಳಲು ನಿಶ್ಚಯಿಸಿದಳು. ಏಕೆಂದರೆ ತಪೋ ಮಾರ್ಗವನ್ನು ಬಿಟ್ಟು ಮತ್ತೆ ಯಾವ ಮಾರ್ಗದಿಂದ ಶಿವನ ಪ್ರೇಮವನ್ನು ಹೊಂದಲು ಸಾಧ್ಯ?

ಇಯೇಷ ಸಾ ಕರ್ತುಮವಂಧ್ಯರೂಪತಾಂ
ಸಮಾಧಿಮಾಸ್ಥಾಯ ತಪೋಭಿರಾತ್ಮನಃ ।
ಅವಾಪ್ಯತೇ ವಾ ಕಥಮನ್ಯಥಾ ದ್ವಯಂ
ತಥಾವಿಧಂ ಪ್ರೇಮ ಪತಿಶ್ಚ ತಾದೃಶಃ ॥
ಕುಮಾ. ೫-೨

ಇದಕ್ಕಾಗಿ ತನ್ನ ತಂದೆತಾಯಿಯರ ಅನುಮತಿಯನ್ನು ಪಡೆದು ಘೋರ ತಪಸ್ಸನ್ನು ಕೈಕೊಂಡಳು. ಇದರಿಂದ ಸುಪ್ರೀತನಾದ ಶಿವನು ಒಂದು ದಿನ ಬ್ರಹ್ಮಚಾರಿಯ ವೇಷದಲ್ಲಿ ಆಕೆಯ ಆಶ್ರಮಕ್ಕೆ ಬಂದು, ಯಾವುದಕ್ಕಾಗಿ ಉಮೆಯು ತಪಸ್ಸನ್ನು ಕೈಕೊಂಡಿರುವಳೆಂದು ಪ್ರಶ್ನಿಸಲು "ಶಿವನನ್ನು ವಿವಾಹವಾಗು ವುದಕ್ಕೆ" ಎಂಬುದಾಗಿ ಪಾರ್ವತಿಯ ಸಖಿಯರು ತಿಳಿಸುವರು. ಅದಕ್ಕೆ ಬ್ರಹ್ಮಚಾರಿಯು ನಕ್ಕು, ಶಿವನ ರೂಪ ಮತ್ತು ಗುಣ ವನ್ನು ಧಿಕ್ಕರಿಸಲು ಪ್ರಾರಂಭಿಸಿದನು. ಈ ಶಿವಾಪವಾದವನ್ನು ತಾಳಲಾರದ ಪಾರ್ವತಿ ಕುಪಿತಳಾಗಿ ಬೇರೆ ಕಡೆಗೆ ಹೊರಡಲು ಸಿದ್ಧಳಾಗಲು, ಬ್ರಹ್ಮಚಾರಿಯು ಆಕ್ಷಣವೇ ಶಿವನಾಗಿ ಪಾರ್ವ ತಿಯ ಕೈಹಿಡಿದನು. ಪಾರ್ವತಿ ಈ ಅನಿರೀಕ್ಷಿತ ದೃಶ್ಯವನ್ನು ಕಂಡು ಚಕಿತಳೂ ಪುಳಕಿತಳೂ ಆದಳು.

ಶಿವನ ಪರವಾಗಿ ಸಪ್ತರ್ಷಿಗಳೂ ಅರುಂಧತಿಯೂ ಹಿಮಾಲಯನ ಬಳಿಗೆ ಬಂದು, ಶಿವನು ಪಾರ್ವತಿಯನ್ನು ಮದುವೆಯಾಗಲು ಬಯಸಿರುವನೆಂದು ತಿಳಿಸಿದರು. ಪರ್ವತನು ಹರ್ಷಚಿತ್ತನಾಗಿ ಮಗಳನ್ನು ಶಿವನಿಗೆ ಕೊಟ್ಟು ವಿವಾಹಮಾಡಲೊಪ್ಪಿದನು. ಶಿವ ಪಾರ್ವತಿಯರ ವಿವಾಹವು ಅತಿ ವಿಜೃಂಭಣೆಯಿಂದ ಜರುಗಿತು. ಸುಪ್ರೀತನಾದ ಶಿವನು ಮನ್ಮಥನನ್ನು ಪುನಃ ಜೀವಂತನನ್ನಾಗಿ ಮಾಡಿ ದೇವತೆಗಳನ್ನು ಹರುಷಗೊಳಿಸಿದನು. ಕ್ರಮೇಣ ಶಿವ ಪಾರ್ವತಿಯರು ಕುಮಾರನನ್ನು ಪಡೆದರು. ಈ ದಿವ್ಯಜನನ ವೃತ್ತಾಂತವನ್ನು ಕೇಳಿ ಜಗತ್ತೇ ಹರುಷಗೊಂಡಿತು. ಕೆಲವು ಕಾಲಾನಂತರ ದೇವತೆಗಳು ಶಿವನ ಮಗನಾದ ಕುಮಾರನಿಗೆ ಸೈನ್ಯಾಧಿಪತ್ಯವನ್ನು ವಹಿಸಿ ಸ್ವರ್ಗವನ್ನು ಮುತ್ತಿದರು. ಯುದ್ಧದಲ್ಲಿ ವೀರನಾದ ಕುಮಾರನು ತಾರಕಾಸುರನನ್ನು ಸಂಹರಿಸಿದನು. ಪ್ರಪಂಚವು ಆನಂದಪಟ್ಟಿತು. ಇಂದ್ರನಿಗೆ ಪುನಃ ಸ್ವರ್ಗವು ಕೈವಶವಾಯಿತು.

ಈ ರೀತಿಯಾಗಿ ಪಾರ್ವತೀ ಪರಮೇಶ್ವರರ ವಿವಾಹವನ್ನೂ ಕುಮಾರನ ಜನನವನ್ನೂ ವರ್ಣಿಸಿರುವುದರಿಂದ ಕಾವ್ಯಕ್ಕೆ 'ಕುಮಾರಸಂಭವ' ವೆಂದು ಹೆಸರಾಯಿತು. ಕಾವ್ಯದಲ್ಲಿ ೧೦೯೬ ಪದ್ಯಗಳನ್ನೊಳಕೊಂಡ ಹದಿನೇಳು ಸರ್ಗಗಳಿವೆ. ಕಾಳಿದಾಸನು ಕತೆಯನ್ನು ಶಿವಪುರಾಣದಿಂದಲೂ, ಸ್ಕಾಂದಪುರಾಣದಿಂದಲೂ ಆಯ್ದುಕೊಂಡಿರಬಹುದು. ಕತೆಯು ಬಹು ಉನ್ನತವಾದದ್ದು; ಭಾರತೀಯರಿಗೆ ಪವಿತ್ರವಾದದ್ದು. ಮೊದಲಿನ ಸರ್ಗದಲ್ಲಿ ಹಿಮಾಲಯ ಪರ್ವತವು ಅದ್ಭುತವಾದ ರೀತಿಯಲ್ಲಿ ವರ್ಣಿಸಲ್ಪಟ್ಟಿದೆ. ಎರಡನೆಯದರಲ್ಲಿ, ಬ್ರಹ್ಮನನ್ನು ಕುರಿತು ರಚಿಸಿರುವ ಸ್ತೋತ್ರದಲ್ಲಿ ಭಕ್ತಿರಸವು ತುಂಬಿದೆ.

ಮೂರನೆಯ ಸರ್ಗದಲ್ಲಿ ವಸಂತಋತುವಿನ ಸೊಗಸೂ, ಆ ಸೊಗಸಿಗೆ ಮನಸೋಲದೆ ತಪೋಮಗ್ನನಾಗಿ ಕುಳಿತಿರುವ ಹರನ ಚಿತ್ರವೂ ಕವಿಯ ಅಪ್ರತಿಮಕಲಾಶಕ್ತಿಯನ್ನು ಪ್ರಕಾಶ ಪಡಿಸುತ್ತವೆ. ನಾಲ್ಕನೆಯದರಲ್ಲಿ ಬರುವ ರತಿವಿಲಾಪವು ಸಾಹಿತಿಗಳ ಮೆಚ್ಚುಗೆಯನ್ನು ಪಡೆದಿದೆ. ಇದು ರಘುವಂಶದ ಅಜವಿಲಾಪದಂತೆ ಒಂದು ಶೋಕಗೀತೆ. ಆದರೆ ಅಜವಿಲಾಪಕ್ಕಿಂತ ಇಲ್ಲಿ ಪ್ರತಿಪಾದಿತವಾಗಿರುವ ಶೋಕವು ತೀವ್ರವಾದುದು. ಐದನೆಯ ಸರ್ಗದಲ್ಲಿ ಕಾಳಿದಾಸನು ಪ್ರೇಮವನ್ನು ಕಂಡ ಬಗೆಯನ್ನು ಅರಿಯುತ್ತೇವೆ. ರೂಪಲಾವಣ್ಯದಿಂದ ಉತ್ಪನ್ನವಾಗುವ ಪ್ರೇಮವು ನಿಜವಾದ, ಆದರ್ಶವಾದ ಪ್ರೇಮವಲ್ಲ. ಅಂತಹ ಪ್ರೇಮವು ಕ್ಷಣಿಕವಾದದ್ದು. ಪಾರ್ವತಿಯ ರೂಪವು ಶಿವನನ್ನು ಮರಳುಗೊಳಿಸದೆ ಹೋಯಿತು. ಅವಳ ತಪಸ್ಸು ಅವನನ್ನು ಒಲಿಸಿತು. ಪ್ರೇಮಕ್ಕೆ ರೂಪ ಮುಖ್ಯವಲ್ಲ; ಮನಸ್ಸು, ಭಕ್ತಿ. ರೂಪವನ್ನೇ ನೆಚ್ಚಿಕೊಂಡು ಪಾರ್ವತೀ ಪರಮೇಶ್ವರರನ್ನು ಒಟ್ಟುಗೂಡಿಸಲು ಹೊರಟ ಹುಚ್ಚು ಮನ್ಮಥನು ಭಸ್ಮೀಭೂತನಾದನು. ಪಾರ್ವತೀಪರಮೇಶ್ವರರಂಥವರ ಆದರ್ಶ ಪ್ರೇಮವು ಕುಮಾರನಂತಹ ವೀರಪುತ್ರನ ಜನನದಲ್ಲಿ ಸಿದ್ಧಿಯನ್ನು ಪಡೆಯುವುದು. ಇದೇ ಸರ್ಗದಲ್ಲಿರುವ ಬ್ರಹ್ಮಚಾರಿ ಮತ್ತು ಪಾರ್ವತಿ ಇವರಿಬ್ಬರ ಸಂಭಾಷಣೆಯು ತಿಳಿನಗೆಯಿಂದಲೂ ಚಮತ್ಕಾರದಿಂದಲೂ ಕೂಡಿ ಸ್ವಾರಸ್ಯವಾಗಿದೆ. ಶಿವನಲ್ಲಿ ಪಾರ್ವತಿಗಿದ್ದ ಪ್ರೇಮ, ಪೂಜ್ಯಭಾವ ಮತ್ತು ಭಕ್ತಿ ಈ ಸರ್ಗದಿಂದ ತಿಳಿಯುತ್ತದೆ. ಒಂಬತ್ತನೆಯ ಸರ್ಗದಲ್ಲಿ ಬರುವ ಪಾರಾವತದ ಸ್ವಾಭಾವಿಕವಾದ ವರ್ಣನೆಯು ಕಾಳಿದಾಸನ ವರ್ಣನಾ ಸಾಮರ್ಥ್ಯವನ್ನು ಸಾರುತ್ತದೆ.

'ಕುಮಾರಸಂಭವ'ದ ವಸ್ತುವಿನಲ್ಲಿ ಐಕ್ಯತೆಯಿದೆ. 'ರಘುವಂಶ'ದ ವಸ್ತುವಿನಲ್ಲಿ ಕಂಡುಬರುವ ಭಿನ್ನತೆಯಿಲ್ಲ. ಆದರೂ, ಮೊದಲಿನ ಎಂಟು ಸರ್ಗಗಳಲ್ಲಿ ಪಾರ್ವತೀಪರಮೇಶ್ವರರ ಪ್ರಣಯವನ್ನೂ, ಮಿಕ್ಕ ಸರ್ಗಗಳಲ್ಲಿ 'ಕುಮಾರ'ನ ಸಾಹಸವನ್ನೂ ವಿವರಿಸಿರುವುದರಿಂದ ಸಂಪೂರ್ಣವಾದ ಐಕ್ಯಕ್ಕೆ ಕುಂದುಂಟಾಗಿದೆ. ಒಟ್ಟಿನಲ್ಲಿ ಕತೆಯಲ್ಲಿ ಸಾಹಸದಭಾಗ ಕಡಮೆ, ಶೃಂಗಾರಭಾಗ ಹೆಚ್ಚು. ಕತೆ ಬೆಳೆಯುತ್ತಾ ಕುತೂಹಲವನ್ನು ಹೆಚ್ಚಿಸುವ ಬದಲು ಕಡಮೆಮಾಡುತ್ತದೆ. ಕಾವ್ಯದಲ್ಲಿ ಪದೇ ಪದೇ ಮರೆಯಲಾಗದಂತಹ ಸೌಂದರ್ಯವರ್ಣನೆಯ ಸನ್ನಿವೇಶಗಳು ದೊರಕುತ್ತವೆ. 'ಮೇಘದೂತ'ದಲ್ಲಿ ಉಕ್ಕಿ ಹರಿಯುವಂತೆಯೇ ಇಲ್ಲಿಯೂ ಕವಿಯ ಕಲ್ಪನಾಶಕ್ತಿಯು ಚಿಮ್ಮಿ ನಲಿಯುತ್ತಿದೆ. ಅಲ್ಲದೆ, ಕವಿಗೆ ಪ್ರಕೃತಿಸೌಂದರ್ಯದ ವರ್ಣನೆಯಲ್ಲಿರುವ ಪಕ್ಷಪಾತವೂ ಹೊರಬೀಳುವುದು. ಆದರೆ, 'ರಘುವಂಶ'ದಲ್ಲಿ ಕಾಣುವ ಕಾಳಿದಾಸನ ಅತ್ಯಂತ ಪರಿಪಕ್ವಶೈಲಿಯೂ ಭಾವವೂ ಇಲ್ಲಿ ಕಾಣುವುದಿಲ್ಲ.

"ಕುಮಾರಸಂಭವ'ದ ಮೊದಲಿನ ಏಳು ಸರ್ಗಗಳು ಮಾತ್ರ ಕಾಳಿದಾಸರಚಿತವೆಂದೂ, ಮಿಕ್ಕವುಗಳು ಅನ್ಯಕವಿಕೃತವೆಂದೂ ಹಲವರು ಅಭಿಪ್ರಾಯಪಡುತ್ತಾರೆ. ಕಾವ್ಯದ ಪೂರ್ವಾರ್ಧದಲ್ಲಿ ಕಂಡುಬರುವ ಕಾವ್ಯಸೌಂದರ್ಯವು ಮಿಕ್ಕ ಭಾಗದಲ್ಲಿ ಕಾಣದಿರುವುದೇ ಈ ತೆರನಾದ ಅಭಿಪ್ರಾಯಕ್ಕೆ ಕಾರಣ. ಆದರೆ ಕಾವ್ಯದ ಎಲ್ಲ ಭಾಗಗಳಲ್ಲಿಯೂ ಯಾವ ಕವಿಯೂ ತನ್ನ ಪ್ರತಿಭೆಯನ್ನು ಬೀರಲಾರ, ಮತ್ತು ಶೃಂಗಾರ ರಸವನ್ನು ಬೆಳೆಸುವಾಗಲೂ ಪ್ರಕೃತಿಯನ್ನು ವರ್ಣಿಸುವಾಗಲೂ ಕವಿ ತೋರುವ ಪ್ರತಿಭೆಯನ್ನು ಯುದ್ಧಾದಿ ಪ್ರಸಂಗಗಳ ವರ್ಣ

ನೆಯಲ್ಲಿ ತೋರಲಾರ. ಇದರಿಂದ ಕಾವ್ಯದ ಮೊದಲಿನ ಏಳು ಸರ್ಗಗಳಷ್ಟು ಮಿಕ್ಕ ಸರ್ಗಗಳು ಅಂದವಾಗಿಲ್ಲವೆಂಬುದನ್ನು ಹೇಳಬಹುದೇ ಹೊರತು, ಏಳನೆಯ ಸರ್ಗದನಂತರ ಬಂದ ಭಾಗಗಳು ಕಾಳಿದಾಸಕೃತವಲ್ಲವೆಂದು ಹೇಳುವುದು ಅಸಂಗತ. ಕಾಳಿದಾಸನು ಕಾವ್ಯಕ್ಕೆ 'ಕುಮಾರಸಂಭವ' ವೆಂದು ಹೆಸರಿಟ್ಟು, ಪಾರ್ವತೀ ಪರಿಣಯವಾದ ಕ್ಷಣವೇ ಕಾವ್ಯವನ್ನು ನಿಲ್ಲಿಸುವುದು ಅಸಂಭವ. ಆದುದರಿಂದ ಎಲ್ಲ ಸರ್ಗಗಳೂ ಕಾಳಿದಾಸನಿಂದ ರಚಿತವಾದುವುಗಳೇ.

ಶಿವನ ಪಾತ್ರವನ್ನು ಕಾಳಿದಾಸನು ಚಿತ್ರಿಸುವುದರಲ್ಲಿ ಅವನ ಚಿತ್ತಸ್ಥೈರ್ಯ, ಅನುಪಮವಾದ ಕೋಪ—ಇವುಗಳನ್ನು ಒತ್ತಿಹೇಳಿದ್ದಾನೆ. ಆತನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳಬೇಕಾದರೆ ಅಚಲವಾದ ಭಕ್ತಿ ಬೇಕು. ಪಾರ್ವತಿಯು ಕೈಕೊಂಡಂತಹ ಘೋರತಪಸ್ಸಿಗೆ ಮಾತ್ರ ಆತನು ಸುಲಭನು. ಶಿವನ ನಿಜಸ್ವಭಾವವನ್ನರಿಯದ ಮೊದ್ದು ಮನ್ಮಥ ದುಗ್ಧನಾದ. ಶಿವನು ಕಠಿನಹೃದಯನಲ್ಲ. ಆತನ ಹೃದಯದ ಸರಳತೆಯು ಸಪ್ತರ್ಷಿಗಳಿಗೂ ಅರುಂಧತಿಗೂ ಪರಿಚಿತವಾದುದು. ಶಿವನನ್ನು ನೋಡಿ ನಾವು ಹೆದರಬೇಕಾಗಿಲ್ಲ; ಏಕೆಂದರೆ ಆತನು ಸಾಧಾರಣ ಮಾನವನಂತೆ ಪಾರ್ವತಿಯನ್ನು ಕಂಡು ಮದುವೆಯಾಗಲು ತವಕಪಡಲಿಲ್ಲವೇನು? ಅವನಂತಹ ಕರುಣೆಯಿಲ್ಲ; ಇಂದ್ರನು ಕುಮಾರನನ್ನು ತಾರಕಾಸುರವಧೆಗಾಗಿ ಕಳುಹಿಸೆಂದು ಪ್ರಾರ್ಥಿಸಲು, ಮರುಮಾತಾಡದೆ ಶಿವನು ಒಪ್ಪಿದನು. ಲೋಕದ ಮಂಗಳಕ್ಕಾಗಿ ಅಲ್ಲವೆ ಶಿವನು ಪಾರ್ವತಿಯನ್ನು ಮದುವೆಯಾದದ್ದು? ಇಲ್ಲದಿದ್ದರೆ ಪ್ರಪಂಚವು ತಾರಕಾಸುರನಿಗೆ ಆಹುತಿಯಾಗುತ್ತಿತ್ತು.

ಶಿವನಿಗೆ ತಕ್ಕ ಹೆಂಡತಿ ಪಾರ್ವತಿ. ಆಕೆಯ ಮನೋ ದಾರ್ಢ್ಯವು ಸ್ತೋತ್ರಾರ್ಹವಾದುದು. ಶಿವನೇ ಪತಿಯೆಂದು ಭಾವಿಸಿ ಕೊನೆಗೆ ಶಿವನನ್ನೇ ಸಾಧಿಸಿಕೊಂಡಳು. ಕಾರ್ಯ ಸಾಧನೆಗಾಗಿ ಉಗ್ರತಪಸ್ಸನ್ನು ಕೈಕೊಂಡಳು; ತಾನಾಗಿಯೇ ಉದುರಿದ ಮರದೆಲೆಗಳನ್ನೂ ಸಹ ಊಟಮಾಡದೆ ಶಿವಧ್ಯಾನ ದಲ್ಲಿ ನಿರತಳಾಗಿ "ಅಪರ್ಣಾ" ಎಂಬ ಹೆಸರನ್ನು ಜೇರಿ ಪಡೆ ದಳು. ಶಿವನನ್ನು ಪ್ರಸನ್ನನಾಗಿ ಮಾಡಿಕೊಳ್ಳದ ತನ್ನ ರೂಪವನ್ನು ಧಿಕ್ಕರಿಸಿದಳು. ಶಿವನಲ್ಲಿ ಆಕೆಗಿದ್ದ ಭಕ್ತಿ ಅಸದೃಶವಾದುದು. ಶಿವನನ್ನು ಜರೆದ ಬ್ರಹ್ಮಚಾರಿಯನ್ನು ನೋಡಲು ಸಹ ಇಷ್ಟ ಪಡಲಿಲ್ಲ. ತಂದೆಯಲ್ಲಾಕೆಗೆ ಬಹು ಗೌರವ. ಶಿವನು ತನ್ನನ್ನು ಮದುವೆಯಾಗಬೇಕೆಂದು ಒತ್ತಾಯಪಡಿಸಲು, ತನ್ನ ತಂದೆ ಯಾದ ಪರ್ವತರಾಜನ ಅನುಮತಿಯನ್ನು ಪಡೆಯುವಂತೆ ಸಖಿ ಯರ ಮೂಲಕ ಅವನಿಗೆ ಹೇಳಿಕಳುಹಿಸುವಳು. ಪಾರ್ವತಿಯು ಲಜ್ಜಾಶೀಲೆ; ಬ್ರಹ್ಮಚಾರಿಯು ಆಕೆಯ ತಪಸ್ಸಿನ ಉದ್ದೇಶ ವನ್ನು ಕೇಳಲು ಅದಕ್ಕೆ ಉತ್ತರವನ್ನು ಸಖಿಯರಿಂದ ಹೇಳಿಸು ವಳು. ಇಂದ್ರನು ಕುಮಾರನನ್ನು ತಾರಕಾಸುರವಧೆಗಾಗಿ ಕಳು ಹಿಸಬೇಕೆನ್ನಲು, ಪಾರ್ವತಿ ಶಿವನನ್ನು ಅಡ್ಡಗಟ್ಟದೆ, ಮಾತೃ ವಾತ್ಸಲ್ಯವನ್ನು ಒತ್ತಿಟ್ಟು, ದೇವತೆಗಳ ಮಂಗಳವನ್ನೇ ಬಯಸಿ, ಹರ್ಷದಿಂದ ವೀರಮಾತೆಯಂತೆ ಯುದ್ಧಕ್ಕಾಗಿ ಪುತ್ರನನ್ನು ಕಳುಹಿಸುವಳು. ಪಾರ್ವತಿಯು ಪತಿವ್ರತೆ, ವೀರಮಾತೆ, ಪ್ರಪಂಚದ ಏಳಿಗೆಗಾಗಿಯೇ ಶಿವನನ್ನು ಕೈಹಿಡಿದ ಕನ್ಯೆ!

ಕಾವ್ಯದಲ್ಲಿ, ಆತ್ಮಗೌರವವುಳ್ಳ ಮತ್ತು ಶಿವನ ಮಾವನಾಗು ವೆನೆಂಬ ಹೆಮ್ಮೆಯನ್ನು ಪಡೆದ ಆದರ್ಶಗೃಹಸ್ಥನಾದ ಹಿಮಾ ಲಯನ ಪಾತ್ರವೂ, ಸರ್ವದಾ ಮಗಳ ಹಿತವನ್ನೇ ಚಿಂತಿಸುವ

ಸದ್ಗೃಹಿಣಿಯಾದ ಮೇನೆಯ ಪಾತ್ರವೂ, ಪತಿವ್ರತಾರತ್ನವೂ ದೊಡ್ಡ ಮುತ್ತೈದೆಯೂ ಆದ ಅರುಂಧತಿಯ ಪಾತ್ರವೂ, ಅಪ್ರತಿಮವೀರನೂ ಯುದ್ಧಕುಶಲಿಯೂ ಆದ ಕುಮಾರನ ಪಾತ್ರವೂ ಅತ್ಯಂತ ಚಾತುರ್ಯದಿಂದ ವರ್ಣಿತವಾಗಿವೆ.

---

## ೫. ರಘುವಂಶ

ಕಾಳಿದಾಸನ 'ಶಾಕುಂತಲ'ವು ನಾಟಕರತ್ನವಾದರೆ ಆತನ 'ರಘುವಂಶವು' ಕಾವ್ಯರತ್ನ. ರಘುವಂಶದ ವಿಸ್ತಾರವಾದ ಕತೆಯನ್ನು ಈ ರೀತಿಯಾಗಿ ಸಂಗ್ರಹಿಸಬಹುದು :

ಸೂರ್ಯವಂಶಕ್ಕೆ ಸೇರಿದ ದಿಲೀಪನೆಂಬ ರಾಜನಿಗೆ ಮಕ್ಕಳಿಲ್ಲದಿರಲು, ಮಕ್ಕಳನ್ನು ಪಡೆಯಬೇಕೆಂಬ ಉದ್ದೇಶದಿಂದ ಆತನು ಕುಲಗುರುವಾದ ವಸಿಷ್ಠರ ಉಪದೇಶದ ಪ್ರಕಾರ ಸುರಭಿಯ ಮಗಳಾದ ನಂದಿನಿಯೆಂಬ ಧೇನುವನ್ನು ಸತೀಸಹಿತನಾಗಿ ಸೇವಿಸತೊಡಗಿದನು. ಒಂದುದಿನ ನಂದಿನಿಯು ಹಿಮಾಲಯಪ್ರದೇಶಗಳಲ್ಲಿ ಹುಲ್ಲುಮೇಯುತ್ತಿರಲು ಅಲ್ಲಿ ಸಿಂಹವೊಂದು ಅದನ್ನು ಹಿಡಿಯಿತು. ಹಸುವಿನ ಕೂಗನ್ನು ಕೇಳಿ ರಾಜನು ಸಿಂಹವನ್ನು ಕೊಲ್ಲುವುದಕ್ಕಾಗಿ ಬಾಣಕ್ಕೆ ಕೈಚಾಚಲು, ಕೈ ಬತ್ತಳಿಕೆಗೇ ಅಂಟಿಹೋಯಿತು. ಆಗ ಸಿಂಹವು ರಾಜನನ್ನು ಕುರಿತು ತಾನು ಶಿವನ ಸೇವಕನೆಂದೂ ಶಿವನಾಜ್ಞೆಯಂತೆ ದೊರೆತ ಮೃಗವನ್ನು ತಿಂದು ಜೀವಿಸುವ ಪದ್ಧತಿ ತನ್ನದೆಂದೂ ತಿಳಿಸಿ, ಸಾಹಸಮಾಡದೆ ಹಿಂದಿರುಗಬೇಕೆಂದು ರಾಜನಿಗೆ ಹೇಳಿತು. ರಾಜನು ಏನಾದರೂ ಮಾಡಿ ನಂದಿನಿಯನ್ನು

ಪಾಲಿಸಲು, ಹಸುವನ್ನು ಬಿಟ್ಟು ಅದಕ್ಕೆ ಬದಲಾಗಿ ತನ್ನನ್ನು ಊಟಮಾಡಬೇಕೆಂದು ಸಿಂಹವನ್ನು ಪ್ರಾರ್ಥಿಸಿಕೊಂಡು, ಸಂತೋಷದಿಂದ ತನ್ನ ತನುವನ್ನು ಸಿಂಹದ ಬಾಯಿಗೊಡ್ಡಿದನು. ಇಂತಹ ಶ್ಲಾಘನೀಯವಾದ ಆತ್ಮತ್ಯಾಗವನ್ನು ನೋಡಿ, ಆ ಮಾಯಾಸಿಂಹವು ಅದೃಶ್ಯವಾಯಿತು. ಅದರ ಸ್ಥಾನದಲ್ಲಿದ್ದ ನಂದಿನಿ ರಾಜನಿಗೆ ಪ್ರಸನ್ನತೆಯನ್ನು ತೋರಿ, ಆತನಿಗೆ ಸಂತಾನ ವಾಗುವಂತೆ ವರವನ್ನು ದಯಪಾಲಿಸಿತು. ಸುದಕ್ಷಿಣೆಯು ಗರ್ಭಿಣಿಯಾಗಿ ರಘುವೆಂಬ ಪುತ್ರನನ್ನು ಹೆತ್ತಳು.

ರಘುವು ಸಕಲವಿದ್ಯಾಪಾರಂಗತನಾಗಿ ಯುವರಾಜಪದವಿ ಯನ್ನಲಂಕರಿಸಿದನು. ಇಷ್ಟರಲ್ಲಿ ದಿಲೀಪನು ತೊಂಬತ್ತೊಂಬತ್ತು ಅಶ್ವಮೇಧಯಾಗಗಳನ್ನು ಮಾಡಿ ನೂರನೆಯ ಯಾಗವನ್ನು ಪ್ರಾರಂಭಿಸಲು ಇಂದ್ರನು ಈರ್ಷ್ಯೆಯಿಂದ ಯಜ್ಞಾಶ್ವವನ್ನು ಅಪಹರಿಸಿದನು. ಯಜ್ಞಪಶುವನ್ನು ಕಾಪಾಡುವ ಕಾರ್ಯವು ರಘುವಿಗೆ ವಹಿಸಲ್ಪಟ್ಟಿತ್ತಾದ್ದರಿಂದ ರಘುವು ಇಂದ್ರನೊಡನೆ ಯುದ್ಧಕ್ಕೆ ಸನ್ನದ್ಧನಾದನು. ಇಂದ್ರನು ಮೆಚ್ಚುವಂತೆ ಯುದ್ಧ ಮಾಡಿ, ದಿಲೀಪನ ಯಾಗವನ್ನು ನೆರವೇರಿಸಿದನು.

ದಿಲೀಪನ ಅನಂತರ ರಾಜನಾದ ರಘುವು ದಿಗ್ವಿಜಯಕ್ಕಾಗಿ ಹೊರಟು ಪ್ರತಿನಾಯಕನಿಲ್ಲದೆ ಮೆರೆದನು. ದಿಗ್ವಿಜಯಯಾತ್ರೆ ಯಿಂದ ಬಂದಮೇಲೆ "ವಿಶ್ವಜಿತ್' ಎಂಬ ಯಾಗವನ್ನು ಮಾಡಿ ತನ್ನ ಸರ್ವಸ್ವವನ್ನೂ ಬ್ರಾಹ್ಮಣರಿಗೆ ದಕ್ಷಿಣೆಯಾಗಿ ಕೊಟ್ಟನು. ಸತ್ಪುರುಷರು ತ್ಯಾಗಕ್ಕಾಗಿಯೇ ಅಲ್ಲವೆ ದ್ರವ್ಯಾ ರ್ಜನೆಮಾಡುವುದು? ಒಂದು ದಿನ ಕೌತ್ಸನೆಂಬ ಋಷಿ ರಘುವಿನ ಸಮೀಪಕ್ಕೆ ಬಂದು, ಗುರುದಕ್ಷಿಣೆಕೊಡಲು ತನಗೆ ಹದಿನಾಲ್ಕು ಲಕ್ಷ ವರಹಗಳು ಬೇಕೆಂದು ಕೇಳಿದನು. ವಿಶ್ವಜಿದ್ಯಾಗದಲ್ಲಿ

ಸಮಸ್ತವನ್ನೂ ದಾನಮಾಡಿದ ರಘುವಿನ ಬಳಿ ಕಿಂಚಿತ್ತೂ ಇರದಿದ್ದರೂ ಅವನನ್ನು ಹಣವನ್ನು ಕೊಡಲೊಪ್ಪಿದನು. ಇದಕ್ಕಾಗಿ ಕುಬೇರನೊಡನೆ ಯುದ್ಧಮಾಡಬೇಕೆಂದು ನಿಶ್ಚೈಸಲು, ಕುಬೇರನು ಆತನ ಪರಾಕ್ರಮಕ್ಕೆ ಹೆದರಿ, ಅಂದಿನ ರಾತ್ರಿ ರಘುವಿನ ಕೋಶದಲ್ಲಿ ಸುವರ್ಣವೃಷ್ಟಿಯನ್ನು ಕರೆಸಿದನು. ಈ ಧನದಿಂದ ರಘುವು ಕೌತ್ಸನನ್ನು ಸುಪ್ರೀತನನ್ನಾಗಿ ಮಾಡಲು, ಆತನು 'ವೀರಪುತ್ರನೊಬ್ಬನನ್ನು ಪಡೆ' ಎಂದು ಆಶೀರ್ವದಿಸಿ ತೆರಳಿದನು. ಈ ಆಶೀರ್ವಾದದ ಫಲವೇ ಅಜ.

ಕಾಲಕ್ರಮೇಣ ಅಜನಿಗೆ ವಿವಾಹಕಾಲ ಸಮೀಪಿಸಿತು. ಅದೇ ಸಮಯದಲ್ಲಿ ವಿದರ್ಭರಾಜನಾದ ಭೋಜನು ತನ್ನ ತಂಗಿಯಾದ ಇಂದುಮತಿಯ ಸ್ವಯಂವರವನ್ನು ಏರ್ಪಡಿಸಲು ರಘುವು ತನ್ನ ಮಗನನ್ನು ಅಲ್ಲಿಗೆ ಕಳುಹಿಸಿದನು. ಇಂದುಮತಿಯ ಸ್ವಯಂವರಕ್ಕೆ ಅನೇಕ ರಾಜರು ಬಂದಿದ್ದರು. ಎಲ್ಲ ರಾಜರನ್ನೂ ತಿರಸ್ಕರಿಸಿ ಇಂದುಮತಿ ಅಜನನ್ನು ವರಿಸಿದಳು. ಕೆಲವು ಕಾಲದನಂತರ ಅಜನಿಗೆ ದಶರಥನೆಂಬ ಮಗನು ಜನಿಸಿದನು. ಒಂದು ದಿನ ಅಜನೂ ಇಂದುಮತಿಯೂ ರಾಜೋದ್ಯಾನದಲ್ಲಿರಲು, ಗಗನದಿಂದ ಒಂದು ಪುಷ್ಪಮಾಲೆ ಇಂದುಮತಿಯಮೇಲೆ ಬಿತ್ತು. ಅದರ ಸಂಪರ್ಕವಾದೊಡನೆಯೇ ಆಕೆ ಮೃತಳಾದಳು. ಅಜನು ಇಂದುಮತಿಯ ವಿಯೋಗವನ್ನು ತಡೆಯಲಾರದೆ ಕುಗ್ಗಿ, ಕಂದಿ ಹೇಗೋ ಎಂಟುವರುಷ ಕಾಲ ಬದುಕಿ ಅನಂತರ ಸ್ವರ್ಗಸ್ಥನಾದನು.

ಅಜನ ಬಳಿಕ ದಶರಥನು ಅಯೋಧ್ಯೆಯ ರಾಜನಾದನು. ಒಂದು ದಿನ ಬೇಟೆಯಾಡುವಾಗ ದಶರಥನು ಗಜವೆಂದರಿತು ಬಾಣಬಿಡಲು, ಅದು ಮುನಿಕುಮಾರನೊಬ್ಬನನ್ನು ಕೊಂದಿತು.

ಪುತ್ರಮರಣದಿಂದ ಸಂತಪ್ತನಾದ ಮುನಿಕುಮಾರನ ತಂದೆಯು "ನೀನೂ ಸಹ ನಿನ್ನ ವೃದ್ಧಾಪ್ಯದಲ್ಲಿ ನನ್ನಂತೆ ಪುತ್ರಶೋಕದಿಂದ ಸಾಯುವೆ" ಎಂಬುದಾಗಿ ಶಪಿಸಿ ಮೃತನಾದನು. ಕೆಲವು ದಿನಗಳಾದಮೇಲೆ ಪುತ್ರಕಾಮೇಷ್ಟಿ ಯಾಗಮಾಡಿದ ಫಲವಾಗಿ ದಶರಥನಿಗೆ ರಾಮ, ಭರತ, ಲಕ್ಷ್ಮಣ, ಶತ್ರುಘ್ನರೆಂಬ ಪುತ್ರರು ಜನಿಸಿದರು. 'ರಘುವಂಶ' ದ ೧೧, ೧೨, ೧೩, ೧೪, ೧೫ನೆಯ ಸರ್ಗಗಳಲ್ಲಿ ಶ್ರೀರಾಮಾಯಣದ ಕತೆಯು ಸಂಗ್ರಹವಾಗಿ ಬರೆಯಲ್ಪಟ್ಟಿದೆ.

ರಾಮನನಂತರ ಕುಶಾವತಿಯಲ್ಲಿ ಆಳುತ್ತಿದ್ದ ಕುಶನು ಅಯೋಧ್ಯೆಗೆ ಬಂದು ರಾಜ್ಯಭಾರವನ್ನು ವಹಿಸಿದನು. ಈತನಿಗೆ ನಾಗರಾಜನಾದ ಕುಮುದನ ಸಹೋದರಿಯಾದ ಕುಮುದ್ವತಿಯು ಧರ್ಮಪತ್ನಿಯಾದಳು. ಇವರ ಪುತ್ರನೇ ಅತಿಥಿ. ತನ್ನ ತಂದೆಯು ದಾನವನಾದ ದುರ್ಜಯನೊಡನೆ ಸಂಭವಿಸಿದ ಯುದ್ಧದಲ್ಲಿ ಮಡಿಯಲು, ಅತಿಥಿಯು ಅಯೋಧ್ಯೆಯಲ್ಲಿ ಸಿಂಹಾಸನಾರೂಢನಾದನು. ಅತಿಥಿಯನಂತರ ನಿಷಧ, ನಳ, ನಭ, ಪುಂಡರೀಕ, ಕ್ಷೇಮಧನ್ವರೇ ಮೊದಲಾದ ಇಪ್ಪತ್ತೊಂದು ಜನ ರಾಜರು ಅಯೋಧ್ಯೆಯನ್ನು ಕ್ರಮೇಣ ಆಳಿದರು. ಕೊನೆಯವನಾದ ಸುದರ್ಶನನೆಂಬವನು ತನ್ನ ತಂದೆ ಸಿಂಹದ ಬಾಯಿಗೆ ತುತ್ತಾದುದರಿಂದ ತನ್ನ ಆರನೆಯ ವಯಸ್ಸಿನಲ್ಲಿಯೇ ರಾಜ್ಯಭಾರಕ್ಕೆ ಬಂದನು. ಈತನ ಮಗನೇ ಅಗ್ನಿವರ್ಣ. ಮಗನನ್ನು ರಾಜ್ಯದಲ್ಲಿಟ್ಟು ಸುದರ್ಶನನು ಅಡವಿಗೆ ಹೋದನು. ಇತ್ತ ಅಗ್ನಿವರ್ಣನು ಸ್ತ್ರೀಲೋಲನಾಗಿ, ರಾಜಕಾರ್ಯಗಳನ್ನು ಮರೆತು, ಕೊನೆಗೆ ಕ್ಷಯರೋಗಪೀಡಿತನಾಗಿ ಮಡಿದನು. ಈತನ ಮರಣಾನಂತರ ಗರ್ಭಿಣಿಯಾದ ಈತನ ಹೆಂಡತಿಯೇ

ರಾಜ್ಯವಾಳುವ ಭಾರವನ್ನು ವಹಿಸಿಕೊಂಡಳು. ಇಷ್ಟು 'ರಘುವಂಶ' ದ ವಸ್ತು.

'ರಘುವಂಶ' ವು ೧೫೬೪ ಪದ್ಯಗಳನ್ನೊಳಗೊಂಡ ೧೯ ಸರ್ಗಗಳುಳ್ಳ ಮಹಾಕಾವ್ಯ. ಕಾವ್ಯವನ್ನು ಮೂರು ಭಾಗವಾಗಿ ವಿಂಗಡಿಸಬಹುದು. ಮೊದಲನೆಯ ಒಂಬತ್ತು ಸರ್ಗಗಳಲ್ಲಿ ಶ್ರೀರಾಮನ ಪೂರ್ವಜರ ಚರಿತ್ರೆಯಿದೆ. ೧೦ ನೆಯ ಸರ್ಗದ ಮೊದಲು ೧೫ನೆಯ ಸರ್ಗದ ಕೊನೆಯವರೆಗಿರುವ ಎರಡನೆಯ ಭಾಗವಲ್ಲಿರುವುದೇ ಶ್ರೀರಾಮನ ಕಥೆ. ಮೂರನೆಯ ಭಾಗ ವೆಂದು ಕರೆಯಬಹುದಾದ ಮಿಕ್ಕ ಸರ್ಗಗಳಲ್ಲಿ ರಾಮನ ಅನಂತರ ಅಯೋಧ್ಯೆಯನ್ನಾಳಿದ ರಾಜರ ವೃತ್ತಾಂತವಿದೆ. ಸೂರ್ಯ ವಂಶದವರು ಅಯೋಧ್ಯೆಯಲ್ಲಿ ಬಹುಕಾಲ ಆಳುತ್ತಿದ್ದರೆಂದೂ ಅವರಲ್ಲಿ ದಿಲೀಪ, ರಘು, ಅಜ, ದಶರಥರೆಂಬವರು ಬಹು ಮುಖ್ಯರಾದವರೆಂದೂ, ಇವರ ಅನಂತರ ಬಂದವನೇ ವಿಷ್ಣುವಿನ ಅವತಾರನಾದ ರಾಮನೆಂದೂ, ರಾಮನನಂತರ ೨೪ ಜನರು ಆಳಿ, ಕೊನೆಯ ರಾಜನಾದ ಅಗ್ನಿವರ್ಣನು ಮಕ್ಕಳಿಲ್ಲದೆ ಮೃತ ನಾಗಲು ಅವನ ಪತ್ನಿಯು ಶಾಸಕಿಯಾದಳೆಂದೂ 'ರಘು ವಂಶ' ದಿಂದ ತಿಳಿದು ಬರುತ್ತದೆ. ಕಾವ್ಯದಲ್ಲಿ ಚರಿತ್ರಾಂಶ ವಿದ್ದರೂ ಇರಬಹುದು. ಆದರೆ, ಚರಿತ್ರೆಯ ಕಿಂಚಿದ್ಭಾಗವು ಕಾವ್ಯದ ಕಾದಂಬರೀ ಸಾಗರದಲ್ಲಿ ಮುಳುಗಿ ಹೋಗಿದೆ. ಕಾಳಿ ದಾಸನು ರಘುವಂಶದ ವಸ್ತುವನ್ನು ವಿಷ್ಣುಪುರಾಣ, ಪದ್ಮ ಪುರಾಣ ಮತ್ತು ವಾಲ್ಮೀಕಿ ರಾಮಾಯಣಗಳಿಂದ ಆರಿಸಿ ಕೊಂಡಿದ್ದಾನೆ. ಆದರೂ ಆತನು ತೋರಿರುವ ಕೈವಾಡದಿಂದ ರಾಮನ ಕಥೆಯನ್ನು ಬಿಟ್ಟು ಮಿಕ್ಕ ಎಲ್ಲವೂ ಕಾಳಿದಾಸನ ಕಲ್ಪನೆಯೇ ಎಂಬ ಭಾವನೆ ಬರುತ್ತದೆ. ಶ್ರೀರಾಮನ ಕಥೆ

ಯನ್ನು ಬರೆಯುವಾಗ ಕೆಲವೆಡೆಗಳಲ್ಲಿ ವಾಲ್ಮೀಕಿಗಿಂತ ಹೆಚ್ಚು ಸಾಮರ್ಥ್ಯವನ್ನೂ ಹೊರಪಡಿಸುತ್ತಾನೆ. ನೂರಕ್ಕೆ ತೊಂಬತ್ತುಪಾಲು ರಾಮಾಯಣದ ಕಥೆಯೇ ರಘುವಂಶದ ೧೦-೧೫ ಸರ್ಗಗಳ ಆಧಾರ. ಎಲ್ಲೋ ಒಂದೆರಡು ಬದಲಾವಣೆಗಳು ಕಂಡು ಬರಬಹುದು. ಇವುಗಳನ್ನು ಕಾವ್ಯವನ್ನು ಹೆಚ್ಚು ರಂಜಕವನ್ನಾಗಿ ಮಾಡುವ ದೃಷ್ಟಿಯಿಂದಲೋ ರಸ ಮತ್ತು ಪಾತ್ರೌಚಿತ್ಯ ದೃಷ್ಟಿಯಿಂದಲೋ ಮಾಡಿರಬಹುದು. ಉದಾಹರಣೆಗಾಗಿ: ರಾಮಾಯಣದಲ್ಲಿ ದಶರಥನು ಮುನಿಕುಮಾರನನ್ನು ಅರಿಯದೆ ಕೊಂದನೆಂದೂ ಆನಂತರ ಅವನ ವೃದ್ಧ ಪಿತೃಗಳನ್ನು ಅವನೆಡೆಗೆ ಒಯ್ದನೆಂದೂ ಹೇಳಿದೆ. ರಘುವಂಶದಲ್ಲಾದರೋ ಬಾಲಕನು ಪಿತೃಗಳ ಮುಂದೆಯೇ ಮೃತನಾದನೆಂದು ಉಕ್ತವಾಗಿದೆ. ಇದರಿಂದ ಹೆಚ್ಚು ಕರುಣವು ವಾಚಕನ ಹೃದಯದಲ್ಲಿ ಉದ್ಭವಿಸುವುದು. ರಾಮಾಯಣದ ಪ್ರಕಾರ ದೇವತೆಗಳು ಮೊದಲು ಬ್ರಹ್ಮನಲ್ಲಿಗೆ ಬಂದು ಮೊರೆಯಿಟ್ಟು, ಆನಂತರ ವಿಷ್ಣುವಿನ ಹತ್ತಿರ ಹೋದರೆಂದು ಸೂಚಿತವಾಗಿದೆ. ಕಾವ್ಯದಲ್ಲಾದರೋ ದೇವತೆಗಳು ವಿಷ್ಣುವಿನ ಬಳಿಗೆ ಮೊದಲು ಹೋದರೆಂದು ಹೇಳಿದೆ. ಇದರಿಂದ ವಿಷ್ಣುಬ್ರಹ್ಮರಲ್ಲಿರುವ ತಾರತಮ್ಯವನ್ನು ರಾಮಾಯಣದಲ್ಲಿ ಕಂಡರೂ, ರಘುವಂಶದಲ್ಲಿ ಕವಿ ಕಾಣದಂತೆ ಮಾಡಿದ್ದಾನೆ. ಈ ಬದಲಾವಣೆಯಲ್ಲಿ ಕಾಳಿದಾಸನ ಔಚಿತ್ಯಭಾವನೆಯು ಕಾಣುತ್ತದೆ. ರಾಮನು ಪುಷ್ಪಕ ವಿಮಾನದಲ್ಲಿ ಕುಳಿತು ಲಂಕೆಯಿಂದ ಅಯೋಧ್ಯೆಗೆ ಬರುವಾಗ ಕಂಡ ಸೊಬಗಿನ ದೃಶ್ಯಗಳನ್ನು ವರ್ಣಿಸುವನಷ್ಟೆ; ರಾಮನು ಕಂಡ ಈ ದೃಶ್ಯಗಳನ್ನು ಕಾಳಿದಾಸನು ವಾಲ್ಮೀಕಿಗಿಂತ ಚೆನ್ನಾಗಿ ವರ್ಣಿಸಿದ್ದಾನೆ.

ಐದನೆಯ ಸರ್ಗದಲ್ಲಿ ವೈತಾಳಿಕರು ಅಜನನ್ನು ಕುರಿತು ಮಾಡುವ ಸ್ತುತಿ ಮನೋಹರವಾಗಿದೆ. ಲಯಾನುಗತವಾದ ಚಾರುವಾದ ಕಾಳಿದಾಸನ ಶೈಲಿಯನ್ನೂ ಭಾವನಾವಿಶೇಷವನ್ನೂ ಉದಯಕಾಲದಲ್ಲಿ ಪ್ರಕೃತಿದೇವಿಯ ದಿವ್ಯ ಸೌಂದರ್ಯವನ್ನೂ ಈ ಸ್ತುತಿಯಲ್ಲಿ ಕಾಣಬಹುದು. ಉದಾಹರಣೆಗಾಗಿ:

> ವೃಂತಾಚ್ಛ್ಲಥಂ ಹರತಿ ಪುಷ್ಪಮನೋಕಹಾನಾಂ
> ಸಂಸೃಜ್ಯತೇ ಸರಸಿಜೈರರುಣಾಂಶುಭಿನ್ನೈಃ |
> ಸ್ವಾಭಾವಿಕಂ ಪರಗುಣೇನ ವಿಭಾತವಾಯುಃ
> ಸೌರಭ್ಯಮೀಪ್ಸುರಿವ ತೇ ಮುಖಮಾರುತಸ್ಯ || ರಘು. ೫-೬೯.

ಎಲೈ ಬುದ್ಧಿವಂತರಲ್ಲಿ ಶ್ರೇಷ್ಠನಾದ ಅಜಕುಮಾರನೇ, ರಾತ್ರಿಯು ಕೊನೆಗೊಂಡಿತು; ಹಾಸಿಗೆಯನ್ನು ಬಿಟ್ಟೇಳು. ಬೆಳಗಿನಜಾವದ ತಂಗಾಳಿ ಸ್ವಾಭಾವಿಕವಾಗಿರುವ ನಿನ್ನ ಮುಖಮಾರುತದ ವಾಸನೆಯನ್ನು ಇತರ ಪದಾರ್ಥಗಳ ಸಂಪರ್ಕದಿಂದ ಹೊಂದಲು ಪ್ರಯತ್ನಿಸುತ್ತಿದೆ. ಆದುದರಿಂದಲೇ ಮರಗಳ ತೊಟ್ಟಿನಿಂದ ಕಳಚಿಬಂದ ಪುಷ್ಪವನ್ನು ಸೆಳೆದೊಯ್ಯುತ್ತಿದೆ ಮತ್ತು ಕೆಂಪು ಬಣ್ಣದಿಂದ ಶೋಭಿಸುವ ಎಳಸಾದ ಬಿಸಿಲಿನಿಂದ ಅರಳುತ್ತಿರುವ ಪುಷ್ಪದೊಡನೆ ಸಂಪರ್ಕವನ್ನು ಬೆಳೆಸುತ್ತಿದೆ.

ವಿದ್ಯಾಧಿದೇವತೆಯಾದ ಸರಸ್ವತಿಯೇ ಈ ವೃತ್ತಗಳನ್ನು ರಚಿಸಿದಳೆಂದು ಕಥೆಯಿದೆ. ಮನುಷ್ಯಮಾತ್ರದವನು ಬರೆಯಲಾಗದ ಪದ್ಯಗಳನ್ನು ಕಾಳಿದಾಸನು ಬರೆದಿರುವನೆಂಬುದೇ ಕಥೆಯ ತಾತ್ಪರ್ಯ. ಪದ್ಯಗಳ ರಮ್ಯತೆಯನ್ನು ಸೂಚಿಸುವುದೇ ಕಥೆಯ ಧ್ವನಿ. ಆರನೆಯ ಸರ್ಗದಲ್ಲಿ ಇಂದುಮತೀಸ್ವಯಂವರಕ್ಕೆ

ಬಂದು ಸಭಾಂಗಣದಲ್ಲಿ ಕುಳಿತ ರಾಜರುಗಳ ಶೃಂಗಾರ ಚೇಷ್ಟೆಯನ್ನು ಚಾತುರ್ಯದಿಂದ ಕವಿ ವರ್ಣಿಸಿದ್ದಾನೆ. ಈ ಭಾಗವನ್ನೋದುವಾಗ ನಾವು ಸ್ವಾರಸ್ಯವಾದ ಚಿತ್ರಶಾಲೆಯಲ್ಲಿ ರುವೆವೆಂಬ ಭಾವನೆ ತಲೆದೋರುತ್ತದೆ. ಆದರೆ ಅಜನಿಗೂ ಇತರ ರಾಜರಿಗೂ ಸಂಪ್ರಾಪ್ತವಾದ ಯುದ್ಧದ ವರ್ಣನೆ ಮನಸ್ಸಿಗೆ ಬೇಜಾರನ್ನುಂಟುಮಾಡುತ್ತದೆ. ಎಂಟನೆಯ ಸರ್ಗ ದಲ್ಲಿ ಬರುವ 'ಅಜವಿಲಾಪ'ವು 'ಕುಮಾರಸಂಭವ'ದ 'ರತಿವಿಲಾಪ'ಕ್ಕಿಂತ ಕೀಳುಮಟ್ಟದ್ದು. ಒಂಬತ್ತನೆಯ ಸರ್ಗದಲ್ಲಿ ಚಿತ್ರಕಾವ್ಯ ಬರೆಯಲು ಕವಿ ಯತ್ನಿಸಿದ್ದಾನೆ. ಹತ್ತನೆಯ ಸರ್ಗದ ವಿಷ್ಣುಗೀತೆಯು ಭಕ್ತಿಭರಿತವಾಗಿದೆ. ಹನ್ನೆರಡನೆಯ ಸರ್ಗವೇ ಕಾವ್ಯದಲ್ಲೆಲ್ಲಾ ಊನವಾದ ಭಾಗ. ದಶರಥನ ಸಾವಿನ ಮೊದಲುಗೊಂಡು ರಾವಣನ ವಧೆಯ ಪರ್ಯಂತ ಬರುವ ರಾಮಾಯಣದ ವಿಸ್ತಾರವಾದ ಭಾಗವನ್ನು, ಕೆಲವು ಪದ್ಯಗಳಲ್ಲೇ ಸಂಗ್ರಹಿಸಲು ಹೊರಟು, ಅನೇಕ ಸ್ವಾರ ಸ್ಯವಾದ ಭಾಗಗಳನ್ನು ಬಿಟ್ಟು, ಕಾಳಿದಾಸನು ಕಥೆಯನ್ನು ನೀರಸವನ್ನಾಗಿ ಮಾಡಿದ್ದಾನೆ. ಹದಿನಾಲ್ಕನೆಯ ಸರ್ಗದಲ್ಲಿ ಸೀತೆ ಲಕ್ಷ್ಮಣನ ಮೂಲಕ ರಾಮನಿಗೆ ಕಳುಹಿಸುವ ಸಂದೇ ಶವಿದೆ. ಈ ಪ್ರಕರಣವು ಕರುಣರಸದ ಚರಮಸೀಮೆಯನ್ನೈ ದಿದೆ. ಹದಿನೆಂಟನೆಯ ಸರ್ಗವು ಅನೇಕ ರಾಜರ ಹೆಸರನ್ನು ಸೂಚಿಸುವ ಪಟ್ಟಿ. ಹತ್ತೊಂಬತ್ತನೆಯ ಸರ್ಗವು ಹಠಾತ್ತಾಗಿ ನಿಂತುಹೋಗುತ್ತದೆ. ಇದರಿಂದ ಸರ್ಗ ಮೊಟಕಾಗಿದೆ. ವಸ್ತುವೂ ಸಹ ಅಗ್ನಿವರ್ಣನಿಗೆ ಸಂಬಂಧಿಸಿದುದಾದ್ದರಿಂದ ಕಾವ್ಯವು ದುರಂತವಾಗಿಯೇ ಕೊನೆಗೊಂಡಿದೆ. ಜೊತೆಗೆ ಕಾಳಿದಾಸನು ಅಂತ್ಯ ಮಂಗಳವನ್ನೂ ಹಾಡಿಲ್ಲ. ಹೀಗಾಗಲು ಕಾರಣ

ವೇನೋ ತಿಳಿಯದು. ಕಾಳಿದಾಸನೇನೋ ಯಾವ ಕಾವ್ಯ ವನ್ನೂ ದುರಂತವಾಗಿ ಕೊನೆಗಾಣಿಸುವ ಕವಿಯಲ್ಲ. ಆದುದ ರಿಂದ ಕವಿ ಇನ್ನೂ ಹಲವು ಸರ್ಗಗಳನ್ನು ಬರೆದಿದ್ದನೆಂದೂ ಅವುಗಳು ನಮಗೆ ದೊರೆತಿಲ್ಲವೆಂದೂ ಊಹಿಸಬಹುದು. ಈ ಊಹೆಯನ್ನು ದೃಢಪಡಿಸುವುದಕ್ಕೆ 'ರಘುವಂಶ'ವು ೨೫ ಸರ್ಗ ಗಳನ್ನೊಳಗೊಂಡ ಕಾವ್ಯವೆಂಬ ಜನಶ್ರುತಿಯೂ ಇದೆ. ಅಥವಾ ಕಾಳಿದಾಸನು ೧೯ ಸರ್ಗಗಳನ್ನು ಬರೆದನೆಂದೂ ಬರೆಯ ಬೇಕೆಂದಿದ್ದ ಇತರ ಸರ್ಗಗಳನ್ನು ಆತನಿಗೆ ಕಾರಣಾಂತರಗಳಿಂದ ಬರೆಯಲು ಸಾಧ್ಯವಾಗಲಿಲ್ಲವೆಂದೂ ಊಹಿಸಬಹುದು. ಒಟ್ಟಿ ನಲ್ಲಿ ಕಾಳಿದಾಸನಿಗೆ ಕಥಾನುವಾದ ಸಾಮರ್ಥ್ಯವೆಷ್ಟಿದ್ದಿತೆಂಬು ದನ್ನು ಅರಿಯಬಹುದು. 'ರಘುವಂಶ'ದ ನಾಯಕನಾರೆಂಬು ದನ್ನು ಹೇಳಲು ಕಷ್ಟವಾದರೂ ಶ್ರೀರಾಮನನ್ನು ಗುರುತಿಸ ಬಹುದು. ರಾಮನಂತಹ ಪವಿತ್ರ ಮತ್ತು ವೀರನಾಯ ಕನು ಜನಿಸಬೇಕಾದರೆ, ರಘುವಿನ ದಿವ್ಯ ಚರಿತ್ರೆಯಿಂದ ಪಾವನವಾದ ವಂಶವೇ ಸರಿಯಾದ ಸ್ಥಳವಾದುದರಿಂದ, ರಘುವಿಗೆ ಪ್ರಾಶಸ್ತ್ಯಬಂದು, ಕಾವ್ಯವು 'ರಘುವಂಶ' ವೆಂಬು ದಾಗಿ ಕರೆಯಲ್ಪಟ್ಟಿದೆ.

'ರಘುವಂಶ'ದ ಕಥಾಭಾಗದಲ್ಲಿ ಐಕ್ಯವಿಲ್ಲ. ಇದು ಕಾವ್ಯದ ನ್ಯೂನತೆಯೆಂದೇ ಹೇಳಬೇಕು. ಆದರೆ ಕಾಳಿದಾಸನು ಅನೇಕ ರಾಜರ ಚರಿತ್ರೆಯನ್ನು ವಿವರಿಸುವುದಕ್ಕಾಗಿಯೇ ಕಾವ್ಯ ದಲ್ಲಿ ಪ್ರಯತ್ನ ಪಟ್ಟಿರುವುದರಿಂದ, ಈ ನ್ಯೂನತೆಗೆ ಒಂದು ಸಮಾಧಾನವೂ ಇದೆ. ಕವಿಯು ಆರ್ಯರ ಆದರ್ಶನಾಯಕರ ಆದರ್ಶಗುಣಗಳನ್ನೇ ಸಾರುವ ಭಾಗವನ್ನು ನಮ್ಮ ಮುಂದಿಟ್ಟಿ ದ್ದಾನೆ. ರಾಜತ್ವ ಧರ್ಮವನ್ನರಿತ ದಿಲೀಪ, ವಿಜೇತೃವಾದ

ಮತ್ತು ದಾಕ್ಷ್ಯವಾದ ರಘು, ಆದರ್ಶಪ್ರಣಯಿಯಾದ ಅಜ, ವೀರನಾದ ಮತ್ತು 'ಪ್ರಥಮಾಪರಾದ್ಧ'ನಾದ ದಶರಥ, ಸಕಲಗುಣ ಪರಿಪೂರ್ಣನೂ ಏಕಪತ್ನೀವ್ರತಸ್ಥನೂ ಆದ ರಾಮ—ಇವರ ದಿವ್ಯ ಚಿತ್ರಪಟಗಳನ್ನೇ ನಾವು ಕಾವ್ಯದಲ್ಲಿ ಕಾಣುವುದು. ರಘುವಂಶವು ಒಂದು ಮನೋಜ್ಞವಾದ 'ಜಗನ್ಮೋಹನ ಬಂಗಲೆ !

ಇನ್ನು ಕಾವ್ಯದಲ್ಲಿ ಬರುವ ಪಾತ್ರಗಳು : ದಿಲೀಪನು ಆದರ್ಶರಾಜ, ಗುರುಭಕ್ತ ಮತ್ತು ಶಾಸ್ತ್ರೋಕ್ತಕ್ರಿಯಾಸಕ್ತ, ಹಸುವಾದ ನಂದಿನಿಯ ಜೀವವನ್ನು ಉಳಿಸುವುದಕ್ಕೋಸ್ಕರ ತನ್ನ ಸಾರ್ವಭೌಮಪದವಿಯನ್ನೂ ಯೌವನವನ್ನೂ ಸೊಬಗಿನ ಶರೀರವನ್ನೂ ಲೆಕ್ಕಿಸದೆ, ತನ್ನ ತನುವನ್ನೇ ಸಿಂಹಕ್ಕೆ ಕೊಡಲು ಸಿದ್ಧನಾಗಿ, ಪ್ರಸಿದ್ಧ ತ್ಯಾಗಿಯಾದ ಆ ಶಿಬಿಯ ಉನ್ನತ ಅಂತಸ್ತಿಗೇರುತ್ತಾನೆ. ದಿಲೀಪನಲ್ಲವೆ ಆದರ್ಶಪ್ರಾಯನಾದ ಕ್ಷತ್ರಿಯ ! ಇವನ ಮಗನಾದ ರಘು ಸೂರ್ಯವಂಶದ ಅತ್ಯಂತ ವಿಶ್ರುತನಾಯಕ. ಇಂದ್ರನು ಮೆಚ್ಚುವಂತೆ ಸಮರಾಂಗಣದಲ್ಲಿ ದೇವರಾಜನೊಡನೆ ಹೋರಾಡಿದ ಧೀರ ! ಗುಣವನ್ನು ಯಾರು ತಾನೆ ಮೆಚ್ಚಲಾರರು ? ರಘುವಿನ ಪರಾಕ್ರಮಕ್ಕೆ ಇಂದ್ರನೇ ತಲೆದೂಗಿದ ಮೇಲೆ ಇನ್ನು ಕುಬೇರನ ಪಾಡೇನು ? ಮರುಮಾತಿಲ್ಲದೆ ಕುಬೇರನು ರಘುವಿನ ಕೋಶದಲ್ಲಿ ಕನಕವೃಷ್ಟಿಯನ್ನು ಸುರಿಸಿದನು. ಹೀಗೆ ದೇವತೆಗಳ ಮೆಚ್ಚುಗೆಯನ್ನು ಪಡೆದ ರಘು ಭರತಖಂಡದ ದಿಗ್ವಿಜಯಕಾರ್ಯವನ್ನು ಕೈಗೊಂಡು ಎಲ್ಲೆಲ್ಲಿಯೂ ಜಯಸ್ತಂಭವನ್ನು ನೆಟ್ಟನು. ಅವನು ರಾಜಭೋಗವನ್ನೂ ವಿಶ್ವಜಿದ್ಯಾಗಾನಂತರ ತನಗೊದಗಿದ ದಾರಿದ್ರ್ಯವನ್ನೂ ಅರಿತ ಮಾನವ, "ಅರ್ಥಿಕಾಮಾದಧಿಕಪ್ರದ"ನೆಂಬ

ಬಿರುದುಗೊಂಡ ದಾನಶೀಲ, ಭೋಗತ್ಯಾಗಗಳೆರಡರಲ್ಲಿಯೂ ಸಾಮರಸ್ಯವೇರ್ಪಡಿಸಿದ ಮಹಾಪುರುಷ. ಈತನ ಮುದ್ದು ಮಗನೇ ಅಜ. ಅಜನು ಸುಯೋಧನ ಮತ್ತು ರಾಜಕಾರ್ಯ ನಿಪುಣ, ಅರಸು, ಆದರ್ಶಪ್ರೇಮಿ. ಪತ್ನಿಯನ್ನು ಕಾಡಿಗಟ್ಟಿಯೂ ಸಹ ರಾಮನು ಹೇಗೋ ರಾಜ್ಯಭಾರವನ್ನು ನಿರ್ವಹಿಸಲು ಸಮರ್ಥನಾದ; ಆದರೆ ಅಜನಾದರೋ ಪತ್ನಿ ಆಕಸ್ಮಿಕವಾಗಿ ಮೃತಳಾಗಲು ತನ್ನ ಜೀವವನ್ನು ಧರಿಸಲು ಅಸಾಧ್ಯವೆಂದರಿತು ಕೊನೆಯಲ್ಲಿ ಶೋಕದಿಂದ ಕೊರಗಿ ಮೃತನಾದ. ಸತಿಯು ಪತಿಯ ಪ್ರಾಣವೆಂದೂ, ಸತಿ ಮೃತಳಾದರೆ ಪತಿ ಜೀವರಹಿತನೆಂದೂ ಅಜ ತನ್ನ ಜೀವನಚರಿತ್ರೆಯಿಂದ ಹೇಳಿ ತೋರಿದ್ದಾನೆ. ಅಜನ ಮಗನೇ ಬಹುಗುಣಯುತನೂ ಅನೇಕ ಯಾಗಕರ್ತೃವೂ ಆದ ದಶರಥ. ಈ 'ಮಹಾರಥನು' ಶ್ರವಣ ನೆಂಬ ಋಷಿಕುಮಾರನ ಮರಣಕ್ಕೆ ಕಾರಣನಾಗಿ, ಅರಿಯದೆ ಗೆಯ್ದ ಈ ತನ್ನ 'ಪ್ರಥಮಾಪರಾಧ'ವನ್ನು ಜೀರ್ಣಿಸಿಕೊಳ್ಳಲು ಅಸಮರ್ಥನಾಗಿ ಕೊನೆಗೆ ಪುತ್ರವಿರಹಶೋಕಾಗ್ನಿಯಲ್ಲಿ ಬೆಂದು ಸ್ವರ್ಗಸ್ಥನಾದನು. ಪುತ್ರಪ್ರೇಮವು ಎಷ್ಟರಮಟ್ಟಿನ ವಿಷಯವೆಂಬುದು ದಶರಥನ ವೃತ್ತಾಂತದಿಂದ ಅರಿವಾಗುತ್ತದೆ. ದಶರಥನ ಮಗನೇ 'ರಘುಕುಲಶ್ರೇಷ್ಠ' ನಾದ ರಾಮ. ರಾಮನ ಪೂರ್ವಜರಲ್ಲಿ ಒಂದೆರಡು ದುರ್ಗುಣಗಳು ಹೊಳೆಯುತ್ತಿದ್ದರೆ, ರಾಮನು ಅನೇಕಗುಣಮಂಡಿತ. ಈತನ ಪಿತೃವಾತ್ಸಲ್ಯ, ಭ್ರಾತೃವಾತ್ಸಲ್ಯ ಮತ್ತು ಪರಾಕ್ರಮ ಅಸದೃಶವಾದುವು. ರಾಜತ್ವವೇ ತನ್ನ ಜೀವನದ ಧರ್ಮವೆಂದು ಭಾವಿಸಿ, ಆ ಧರ್ಮಕ್ಕೆ ಅಡ್ಡಿಬರಲು ತನ್ನ ಪ್ರಿಯಪತ್ನಿಯನ್ನೂ ತ್ಯಜಿಸಿದನು. ತನಗೆ ಬಂದ ಅಪವಾದವನ್ನು ಹೋಗಲಾಡಿಸಿಕೊಳ್ಳಲು ಅವನಿಗೆ ಬೇರೆ ಮಾರ್ಗ

ತಿಳಿಯಲಿಲ್ಲ. ಯಶಸ್ಸೇ ಸಂಪತ್ತೆಂಬುದಾಗಿ ತಿಳಿಯುವವರು ತಮ್ಮ ದೇಹ ಮತ್ತು ಇಂದ್ರಿಯಸುಖಕ್ಕಿಂತಲೂ ಒಳ್ಳೆಯ ಹೆಸರೇ ಮುಖ್ಯವೆಂದು ಅರಿಯುವರಲ್ಲವೆ? ಶಂಬೂಕನನ್ನು ವಧಿಸಿದುದು ಕೂಡ ಆದರ್ಶರಾಜನೆನಿಸಿಕೊಳ್ಳುವುದಕ್ಕಾಗಿಯೇ. ಇವೆಲ್ಲಕ್ಕೂ ಮಿಗಿಲಾದದ್ದು ಅದ್ಭುತವಾದ ಆತನ ಏಕಪತ್ನೀ ವ್ರತ. ಶ್ರೀರಾಮನು ಆರ್ಯರ ಆದರ್ಶನಾಯಕ.



## ೬. ಕವಿತಾಸಾಮರ್ಥ್ಯ—ರಸಪ್ರತಿಪಾದನೆ

ಓದುವವರ ಮನಸ್ಸಿಗೆ ಆನಂದವನ್ನುಂಟುಮಾಡುವುದೇ ಕಾವ್ಯದ ಮುಖ್ಯೋದ್ದೇಶ. ಈ ಅಭಿಪ್ರಾಯವನ್ನೇ ಆಲಂಕಾರಿಕರು "ಕಾವ್ಯಂ ರಸಾತ್ಮಕಂ" ಎಂಬ ವಾಕ್ಯದಲ್ಲಿ ಸೂಚಿಸಿರುವರು. ರಸವೇ ಕಾವ್ಯದ ಜೀವವೆಂದು ಕಾಳಿದಾಸನು ತಿಳಿದಿದ್ದನು. ಆದುದರಿಂದಲೇ ಆತನ ಕಾವ್ಯಗಳಲ್ಲಿ ವಿವಿಧ ರಸಗಳ ಪ್ರತಿಪಾದನೆಯನ್ನು ನಾವು ಕಾಣುವುದು. ಕಾಳಿದಾಸನಿಗೆ ಶೃಂಗಾರರಸಪ್ರತಿಪಾದನೆಯಲ್ಲಿ ಆಸಕ್ತಿ ಬಹಳವೆನ್ನಬಹುದು. ಆತನಿಗೆ 'ಶೃಂಗಾರದ ಕವಿ' ಎಂಬ ಹೆಸರೇ ಬಂದುಹೋಗಿದೆ. 'ರಘುವಂಶ'ವನ್ನು ಬಿಟ್ಟು ಕಾಳಿದಾಸನ ಮಿಕ್ಕ ಕಾವ್ಯಗಳ ಮುಖ್ಯ ರಸವು ಶೃಂಗಾರವೇ. ಈ ರಸವು 'ಕುಮಾರಸಂಭವ'ದ ಎಂಟನೆಯ ಸರ್ಗದಲ್ಲಿ ವಿನಾ ಮಿಕ್ಕೆಡೆಗಳಲ್ಲಿ ಅತ್ಯುತ್ತಮವಾದ ರೀತಿಯಲ್ಲಿ ಚಿತ್ರಿತವಾಗಿದೆ. ಹೀಗೆಯೇ 'ವಿಪ್ರಲಂಭಶೃಂಗಾರ'

ಅಥವಾ ಅಗಲುವಿಕೆಯಿಂದುಂಟಾದ ಪ್ರಣಯಿಗಳ ಮನೋ ವ್ಯಥೆಯು ಹಲವೆಡೆ, ಅದರಲ್ಲಿಯೂ ಮೇಘಸಂದೇಶದಲ್ಲಿ, ಅಸ ದೃಶರೀತಿಯಲ್ಲಿ ಹಾಡಲ್ಪಟ್ಟಿದೆ. ರಸಕ್ಕೆ ತಕ್ಕ ಪಾತ್ರವನ್ನು ಆರಿ ಸುವುದರಲ್ಲಿ ಕವಿಯು ನಿಪುಣ. ಶಿವ, ರಾಮ, ಯಕ್ಷ ಮತ್ತು ಅಜ—ಇವರುಗಳೇ ಕಾವ್ಯಗಳಲ್ಲಿ ಬರುವ ನಾಯಕರು. ಪಾರ್ವತಿ, ಸೀತೆ, ಯಕ್ಷಪತ್ನಿ ಮತ್ತು ಇಂದುಮತಿ—ಇವರು ಗಳೇ ಕಾವ್ಯಗಳಲ್ಲಿ ಬರುವ ನಾಯಿಕೆಯರು. ಈ ನಾಯಕ-ನಾಯಿಕೆಯರು ಸಮಾನವಾದ ರೂಪ ಕುಲ ವಯಸ್ಸುಳ್ಳವರು.

ಕುಲೇನ ಕಾಂತ್ಯಾ ವಯಸಾ ನವೇನ
ಗುಣೈಶ್ಚ ತೈಸ್ತೈರ್ವಿನಯಪ್ರಧಾನೈಃ ।
ತ್ವಮಾತ್ಮನಃ ತುಲ್ಯಮಮುಂ ವೃಣೀಷ್ವ
ರತ್ನಂ ಸಮಾಗಚ್ಛತು ಕಾಂಚನೇನ ॥

ರಘು. ೬—೭೯.

ವಧುವು ತನಗೆ ಸಮಾನವಾದ ಗುಣಗಳನ್ನುಳ್ಳ ಅನುರೂಪನಾದ ವರನನ್ನು ಮದುವೆಯಾದರೆ ಆಗ ರತ್ನವು ಬಂಗಾರದೊಡನೆ ಸೇರಿದಂತೆ ಶೋಭಿಸುವುದೆಂಬುದೇ ಕಾಳಿದಾಸನ ಅಭಿಪ್ರಾಯ. ಕಾಳಿದಾಸನು ಇತರ ಕೆಲವು ಕವಿಗಳಂತೆ ಯೌವನ ಮೀರಿ ಹೋದವರಲ್ಲಿ ಯೌವನಾನುಗುಣವಾದ ಶೃಂಗಾರಭಾವವನ್ನು ವರ್ಣಿಸಲು ಪ್ರಯತ್ನಿಸಿಲ್ಲ. ಈ ಶೃಂಗಾರದ ಬೆಳವಣಿಗೆಗೆ ಕವಿ ಉಚಿತವಾದ ಸ್ಥಾನವನ್ನೂ ಸೂಚಿಸುತ್ತಾನೆ. ಶಿವ-ಪಾರ್ವತಿ ಯರ ಪ್ರೇಮ ಅಂಕುರಿಸಿ ಬೆಳೆಯುವುದು ಪವಿತ್ರವೂ ಶಾಂತವೂ ಆದ ಗಿರಿ-ವನ ಪ್ರದೇಶಗಳಲ್ಲಿ. ಅಲ್ಲದೆ ಶೃಂಗಾರ ಚಿತ್ರವನ್ನು ಬರೆಯಲೆಳಸಿ ಅನುಚಿತವಾದ ಸನ್ನಿವೇಶಗಳನ್ನು ಎಲ್ಲಿಯೂ ಕಲ್ಪಿಸಿಕೊಳ್ಳುವುದಿಲ್ಲ. ನಾಯಕ-ನಾಯಿಕೆಯರು ಒಬ್ಬರನ್ನೊ

ಬ್ಬರು ನೋಡಿದ ಕ್ಷಣವೇ ಇಬ್ಬರಲ್ಲಿಯೂ ಪ್ರಣಯಭಾವವು ಅಂಕುರಿತವಾಯಿತೆಂದು ಕಾಳಿದಾಸನು ಕಾವ್ಯಗಳಲ್ಲಿ ಸೂಚಿಸಿ ಶೃಂಗಾರದ ಚಿತ್ರಕ್ಕೆ ಪುಷ್ಟಿಯನ್ನುಂಟುಮಾಡುತ್ತಾನೆ. ಶಕುಂತಳೆಯನ್ನು ಕಂಡೊಡನೆಯೇ ದುಷ್ಯಂತನ ಅಂತಃಕರಣವು ಆಕೆಯನ್ನು ಬಯಸುವಂತೆ, ಪುರೂರವನನ್ನು ನೋಡಿದೊಡನೆಯೇ ಉರ್ವಶಿಯ ಮನಸ್ಸು ಚಲಿಸುವಂತೆ, ಪಾರ್ವತಿಯನ್ನು ಕಂಡು ಶಿವನೂ, ಇಂದುಮತಿಯನ್ನು ಕಂಡು ಅಜನೂ ಪರಸ್ಪರ ಮೋಹಗೊಳ್ಳುವರು. ನಾರದನು ಹಿಮಾಲಯನ ಬಳಿ ನಿಂತಿದ್ದ ಪಾರ್ವತಿಯನ್ನು ನೋಡಿ, ಆಕೆ ಶಿವನ ಏಕಮಾತ್ರ ಪತ್ನಿಯೂ ಅರ್ಧಾಂಗಿಯೂ ಆಗುವಳೆಂದು ಎಂದು ತಿಳಿಸಿದನೋ ಅಂದು ಮೊದಲು ಪಾರ್ವತಿ ಶಿವನೇ ತನ್ನ ಪತಿಯೆಂದು ನಿಶ್ಚಯಿಸಿದಳು. ಇಂದುಮತಿ ತನ್ನ ಸಖಿಯಾದ ಸುನಂದೆ ತೋರಿಸಿದ ಅನೇಕ ರಾಜರನ್ನು ತಿರಸ್ಕರಿಸಿದಳು. ಅಜನನ್ನು ತೋರಿದೊಡನೆಯೇ ತನ್ನ ಲಜ್ಜೆಯನ್ನು ಕಡಮೆಮಾಡಿ ತನ್ನ ಅಮಲವಾದ ಪ್ರಸಾದದೃಷ್ಟಿಯನ್ನು ಅಜನ ಮೇಲೆ ಬೀರಿದಳಂತೆ! ಪ್ರಣಯಿಗಳ ಮನಸ್ಸಿನಲ್ಲಿ ಆಗುವ ಶೃಂಗಾರಭಾವವನ್ನು ಕವಿಯು ಎಷ್ಟು ವ್ಯಂಗ್ಯವಾಗಿ ವರ್ಣಿಸಿ ತೋರಿಸುವನೆಂಬುದಕ್ಕೆ ಆತನ ಕಾವ್ಯಗಳಿಂದ ಹೇರಳವಾಗಿ ಸಂದರ್ಭಗಳನ್ನು ಉಲ್ಲೇಖಿಸಬಹುದು. ಉದಾಹರಣೆಗಾಗಿ—

ತಥಾಗತಾಯಾಂ ಪರಿಹಾಸಪೂರ್ವಂ
ಸಖ್ಯಾಂ ಸಖೀ ವೇತ್ರಭೃದಾಬಭಾಷೇ ।
ಆರ್ಯೇ ವ್ರಜಾಮೋಽನ್ಯತ ಇತ್ಯಥೈನಾಂ
ವಧೂರಸೂಯಾಕುಟಿಲಂ ದದರ್ಶ ॥

ರಘು. ೬ ೮೨.

ಇಂದುಮತಿಯು ಅಜನಲ್ಲಿ ಪ್ರೇಮಗೊಂಡಿರುವಳೆಂದರಿತೂ. ಆಕೆಯ ಸಖಿಯಾದ ಸುನಂದೆಯು ಪರಿಹಾಸಕ್ಕಾಗಿ "ಸಖಿ, ಬೇರೆಡೆಗೆ ಸಾರುವ" ಎನ್ನಲು ಇಂದುಮತಿಯು ಸುನಂದೆಯನ್ನು ರೋಷದಿಂದಲೂ ವಕ್ರವಾದ ದೃಷ್ಟಿಯಿಂದಲೂ ನೋಡಿದಳಂತೆ!

ಇಷ್ಟು 'ಸಂಭೋಗಶೃಂಗಾರ'ದ ಮಾತು. ಈ ತೆರನಾದ ಶೃಂಗಾರವನ್ನು ಮಾತ್ರ ಕವಿ ಚಿತ್ರಿಸಿದ್ದಲ್ಲಿ ಆವನಿಗೆ ಬಂದಿರುವ ಕೇವಲ "ಶೃಂಗಾರದ ಕವಿ" ಎಂಬ ಅಪಪ್ರಥೆ ಅಳಿಸಿಹೋಗು ತ್ತಿರಲಿಲ್ಲ. ಆದರೆ ಕಾಳಿದಾಸನು ಸಂಭೋಗ ಶೃಂಗಾರಕ್ಕಿಂ ತಲೂ ವಿಪ್ರಲಂಭ ಶೃಂಗಾರಕ್ಕೇ ಹೆಚ್ಚು ಬೆಲೆಯನ್ನೂ ಗಮನ ವನ್ನೂ ಕೊಟ್ಟು ಪ್ರೇಮಭಾವಕ್ಕೆ ಪವಿತ್ರತೆಯನ್ನು ಜೋಡಿಸಿ ಶೃಂಗಾರವನ್ನು ಉನ್ನತ ಅಂತಸ್ತಿಗೇರಿಸಿದ್ದಾನೆ. ವಿಪ್ರಲಂಭ ವೆಂದರೆ ಪ್ರಣಯಿಗಳ ಅಗಲುವಿಕೆ—ಯಕ್ಷನು ತನ್ನ ಪತ್ನಿಯನ್ನು ಅಗಲಿದಂತೆ. ಅಗಲಿದಾಗಲೂ ಪತಿಪತ್ನಿಯರು ಒಬ್ಬರನ್ನೊ ಬ್ಬರು ಸ್ಮರಿಸುತ್ತಾ, ಪತಿಯು ಪತ್ನಿಯ, ಪತ್ನಿಯು ಪತಿಯ ಹಿತ ವನ್ನೇ ಬಯಸುತ್ತಾ, ತಮ್ಮ ಪ್ರೇಮವನ್ನು ಸೂಚಿಸಿದರೆ ಅಂತಹ ಪ್ರೇಮದ ಸ್ಥೈರ್ಯವೂ ಬಲವೂ ಎಷ್ಟೆಂದು ವ್ಯಕ್ತವಾಗುತ್ತದೆ. ವಿರಹಾವಸ್ಥೆಯಲ್ಲಿರುವ ಪ್ರಣಯಿಗಳಿಗೆ ಸುಖವೆಲ್ಲಿಂದ ಬಂ ದೀತು? ಯಕ್ಷನನ್ನು ಅಗಲಿದ ಯಕ್ಷಪತ್ನಿಯ ಸ್ಥಿತಿಯನ್ನಾ ದರೂ ನೋಡಿ. ಪತಿಯು ದೂರನಾಗಲು ಆಕೆ ಸಹಚರನನ್ನಗ ಲಿದ ಹೆಣ್ಣು ಚಕ್ರವಾಕ ಪಕ್ಷಿಯಂತೆ ಶೋಚನೀಯಾವಸ್ಥೆಯ ನ್ನೈದುವಳು. ಆಕೆಯ ಮುಖಚ್ಛಾಯೆಯು ಹಿಮದ ಹೊಡೆ ತಕ್ಕೆ ಸಿಕ್ಕಿದ ಕಮಲದಂತೆ ಆಗುವುದು. ಪ್ರಬಲರೋದನ ದಿಂದ ಆಕೆಯ ನೇತ್ರಗಳು ಬಾತುಹೋಗುವುವು, ನಿಟ್ಟುಸಿರಿ ನಿಂದ ಆಕೆಯ ತುಟಿಗಳು ಕಳೆಗೆಟ್ಟುಹೋಗುವುವು. ಯಾವಾ

ಗಲೂ ಹಸ್ತನ್ಯಸ್ತ ಮುಖವುಳ್ಳವಳಾಗಿ ಚಿಂತಿಸುತ್ತಿರುವಳು. ಯಕ್ಷಪತ್ನಿಯ ದುಃಸ್ಥಿತಿಯನ್ನು ಮನಕರಗುವಂತೆ ಕವಿ ವರ್ಣಿಸಿದ್ದಾನೆ.

> ಸಾ ಸಂನ್ಯಸ್ತಾಭರಣಮಬಲಾ ಪೇಶಲಂ ಧಾರಯಂತೀ
> ಶಯ್ಯೋತ್ಸಂಗೇ ನಿಹಿತಮಸಕೃದ್ದುಃಖದುಃಖೇನ ಗಾತ್ರಮ್ |
> ತ್ವಾಮಪ್ಯಸ್ರಂ ನವಜಲಮಯಂ ಮೋಚಯಿಷ್ಯತ್ಯವಶ್ಯಂ
> ಪ್ರಾಯಃ ಸರ್ವೋ ಭವತಿ ಕರುಣಾವೃತ್ತಿರಾರ್ದ್ರಾಂತರಾತ್ಮಾ ||
>
> ಉ. ಮೇ. ೩೩.

ಪತಿಯನ್ನಗಲಿದನಂತರ ಯಕ್ಷಪತ್ನಿಯ ಶೋಚನೀಯ ಸ್ಥಿತಿಯನ್ನು ನೋಡಿ, ಅಚೇತನವಸ್ತುವಾದ ಮೇಘವೂ ಸಹ ಕಣ್ಣೀರಿಡುವುದಂತೆ! ಈ ಸ್ಥಿತಿಗೆ ಬರಲು, ಆಕೆಗೆ ಪತಿಯಲ್ಲಿದ್ದ ಪ್ರೇಮವಾದರೂ ಎಷ್ಟು ಗಾಢವಾದದ್ದು-ಸ್ಥಿರವಾದದ್ದು!

ಇಷ್ಟು ಶೃಂಗಾರರಸದ ವಿಚಾರ. ಮುಂದೆ ಹಾಸ್ಯರಸ ಪ್ರತಿಪಾದನಾಕ್ರಮವನ್ನು ಪರಿಶೀಲಿಸೋಣ. ಕಾಳಿದಾಸನು ಹಾಸ್ಯರಸಕ್ಕೆ ತನ್ನ ನಾಟಕಗಳಲ್ಲಿ ಪ್ರಾಶಸ್ತ್ಯಕೊಟ್ಟಂತೆ ಕಾವ್ಯಗಳಲ್ಲಿ ಕೊಟ್ಟಿಲ್ಲ. ಆದರೂ ಕಾವ್ಯದ ಹಲವು ಸನ್ನಿವೇಶಗಳಲ್ಲಿ ತಿಳಿನಗುವುಂಟಾಗುವುದು. 'ರಘುವಂಶ' ದಲ್ಲಿ ಇಂದುಮತೀ ಸ್ವಯಂವರ ವೃತ್ತಾಂತವನ್ನು ಹೇಳುವಾಗ ಸ್ವಯಂವರಕ್ಕೆ ಅನೇಕ ರಾಜರು ಬಂದಿದ್ದರೆಂದೂ, ಅವರೆಲ್ಲರೂ ಸ್ವಯಂವರ ಮಂಟಪದಲ್ಲಿ ಕುಳಿತಿದ್ದರೆಂದೂ ಹೇಳಿ ಆ ರಾಜರ ಕೆಲವು ಶೃಂಗಾರಚೇಷ್ಟೆಗಳನ್ನು ಕವಿ ವರ್ಣಿಸುತ್ತಾನೆ. ಈ ವರ್ಣನೆಯನ್ನೋದಿ ಯಾರುತಾನೆ ಮುಗುಳ್ನಗೆ ನಗರು ? ರಾಜಸಮಾಜದಲ್ಲಿದ್ದ ಒಬ್ಬ ರಾಜಕುಮಾರನು ಅರಳಿದ ಒಂದು ತಾವರೆಯನ್ನು ಕೈಯಲ್ಲಿ ಹಿಡಿದು ಸುತ್ತಾಡಿಸುತ್ತಿದ್ದನಂತೆ. "ನೀನು

ನನ್ನನ್ನು ಮದುವೆಯಾದರೆ ನಿನ್ನೊಡನೆ ಈರೀತಿಯಾಗಿ ವಿಹರಿಸುವೆನು" ಎಂಬುದೇ ಆತನ ಈ ಅಂಗಚೇಷ್ಟೆಯ ಅಭಿಪ್ರಾಯವಂತೆ! ಇದನ್ನು ಕಂಡು "ಕೈಯನ್ನು ಆಡಿಸುವುದು ಅಶುಭವಾದ ಅಂಗಚೇಷ್ಟೆ" ಎಂಬುದಾಗಿ ಇಂದುಮತಿ ಅಭಿಪ್ರಾಯಪಟ್ಟು ಮತ್ತೊಬ್ಬ ರಾಜನಲ್ಲಿಗೆ ಸರಿದಳಂತೆ: ಮತ್ತೊಬ್ಬ ರಾಜಕುಮಾರನು ತನ್ನ ತಲೆಯ ಮೇಲಣ ಕಿರೀಟವು ಸರಿಯಾಗಿದ್ದರೂ ಕಿರೀಟವು ತನ್ನ ಸ್ಥಳದಿಂದ ಜಾರಿರುವುದನ್ನು ಸರಿಮಾಡಿಮಾಡಿಕೊಳ್ಳುವವನಂತೆ ನಟಿಸುತ್ತಾ, ತನ್ನ ಕೈಗಳಿಂದ ಕಿರೀಟವನ್ನು ತಲೆಗೆ ಹೊಂದಿಸಿಕೊಳ್ಳುತ್ತಿದ್ದನಂತೆ!—

> ಕಶ್ಚಿದ್ಯಥಾಭಾಗಮವಸ್ಥಿತೇಽಪಿ
> ಸ್ವಸನ್ನಿವೇಶಾದ್ವ್ಯತಿಲಂಘಿನೀವ ।
> ವಜ್ರಾಂಶುಗರ್ಭಾಂಗುಲಿರಂಧ್ರಮೇಕಂ
> ವ್ಯಾಪಾರಯಾಮಾಸ ಕರಂ ಕಿರೀಟೇ ॥
>
> ರಘು. ೬-೧೯.

ಈ ರೀತಿಯಾಗಿ ಅರಸುಮಕ್ಕಳ ಕರಚರಣಾದಿ ಚೇಷ್ಟೆಗಳು ತಿಳಿನಗುವನ್ನುಂಟುಮಾಡುವಂತೆ ಏಳನೆಯ ಸರ್ಗದ ಆದಿಭಾಗದಲ್ಲಿ ಬರುವ ಮತ್ತೊಂದು ಸನ್ನಿವೇಶವೂ ಹಾಸ್ಯರಸದಿಂದ ಕೂಡಿದೆ. ಅಜ-ಇಂದುಮತಿಯರ ಮೆರವಣಿಗೆಯನ್ನು ಕಾಣಲು ಕಾತರರಾದ ಪುರಸುಂದರಿಯರು ತಮ್ಮ ತಮ್ಮ ಕೆಲಸಗಳನ್ನು ತೊರೆದು ಕಿಟಕಿಗಳೆಡೆಗೆ ಓಡಿಬಂದರು. ಒಬ್ಬ ಸುಂದರಿಯು ಸಣ್ಣದಾದ ಶಲಾಕೆಯೊಂದರಿಂದ ಬಲಗಣ್ಣಿಗೆ ಕಾಡಿಗೆ ಹಚ್ಚಿಕೊಳ್ಳುತ್ತಿದ್ದಳು. ಎಡಗಣ್ಣಿಗೆ ಕಾಡಿಗೆ ಹಚ್ಚುವುದರೊಳಗಾಗಿ ಮೆರವಣಿಗೆ ಬರಲು ಶಲಾಕೆಯನ್ನು ಹಿಡಿದಿದ್ದವಳು ಹಾಗೆಯೇ ಕಿಟಕಿಯ ಬಳಿಗೈತಂದಳಂತೆ!—

ವಿಲೋಚನಂ ದಕ್ಷಿಣಮಂಜನೇನ
ಸಂಭಾವ್ಯ ತದ್ವಂಚಿತ ವಾಮನೇತ್ರಾ ।
ತಥೈವ ವಾತಾಯನ ಸನ್ನಿಕರ್ಷಂ
ಯಯೌ ಶಲಾಕಾಮಪರಾ ವಹಂತೀ ॥

ರಘು. ೭-೮.

ಮತ್ತೊಬ್ಬ ರಮಣಿಯು ಕಿಟಕಿಯ ಹತ್ತಿರ ಬಂದು ನಿಂತು ನೋಡುವ ಸಂಭ್ರಮದಲ್ಲಿ "ಸಡಿಲಿದ ನಿರಿಮುಡಿ" ಯನ್ನು ಸಹ ಗಮನಿಸದೆ ನಿಂತು ಮೆರವಣಿಗೆಯನ್ನು ನೋಡುತ್ತಿದ್ದಳಂತೆ!

ನಗುವಿನ ಮಾತಂತಿರಲಿ. ಕಾಳಿದಾಸನು ಕರುಣ ಸನ್ನಿವೇಶಗಳನ್ನು ಬಣ್ಣಿಸಿದರೆ ಕಲ್ಲೆದೆಯು ಕರಗುವಂತಾಗುವುದು. ಅಜ ಮತ್ತು ಇಂದುಮತಿಯರಿಗೊದಗಿದ ಸಂಕಟವನ್ನು ನೋಡಿ. ಅಜನು ಸತ್ಯವಂತ. ತನ್ನ ಪ್ರಜೆಗಳನ್ನು ಸೆವ್ಮದಿಗೊಳಿಸಿದವನು. ಆತನಿಗಾದ ಗತಿಯಾದರೂ ಏನು? ಅಸದೃಶಳಾದ ಸತಿ ಎಂದರೆ ಆತನಿಗೆ ಪ್ರಾಣ. ಇಂದುಮತಿಯಾದರೋ ಇತರ ರಾಜರನ್ನು ತಿರಸ್ಕರಿಸಿ ಅಜನನ್ನು ಮದುವೆಯಾದಳು. ಇಂತಹವನು ಇಂದುಮತಿಯೊಡನೆ ಉದ್ಯಾನದಲ್ಲಿ ವಿಹರಿಸುತ್ತಿರಲಾಗಿ 'ಅಮರಕುಸುಮ' ಹಾರವು ಆಕೆಯ ಮೇಲೆ ಬೀಳಲು ತಕ್ಷಣವೇ ಇಂದುಮತಿ ಮಡಿದಳು. ಪ್ರಿಯತಮನೊಡನೆ ಸ್ವೇಚ್ಛೆಯಾಗಿ ವಿಹರಿಸುವಾಗ ಇದೆಂತಹ ಅನಿರೀಕ್ಷಿತ ಮೃತ್ಯು! ಇವನ್ನು ಕಾಳಿದಾಸನಾದರೂ ವರ್ಣಿಸುವುದೆಂತು!—ಆಕೆಯು ನೆಲದಮೇಲೆ ಬೀಳುವಾಗ ಪತಿಯನ್ನೂ ಉರುಳಿಸಿಕೊಂಡು ಬಿದ್ದಳಂತೆ. "ಹೆಚ್ಚು ಎಣ್ಣೆಯಿಂದ ಕೂಡಿ ಉರಿಯುತ್ತಿರುವ ದೀಪದ ಜ್ವಾಲೆಯೊಂದು ಉದಿರಲಾಗಿ, ತೈಲ ಬಿಂದುವೂ ಸಹ ಅವರೊಡನೆ ಬೀಳದಿರುವುದೆ?"—

ವಪುಷಾ ಕರಣೋಜ್ಝಿತೇನ ಸಾ
ನಿಪತಂತೀ ಪತಿಮಪ್ಯಪಾತಯತ್ ।
ನನು ತೈಲನಿಷೇಕಬಿಂದುನಾ
ಸಹ ದೀಪಾರ್ಚಿರುಪೈತಿ ಮೇದಿನೀಮ್ ॥

ರಘು. ೮-೩೮.

ಇಂದುಮತಿಯು ಮೃತಳಾಗಲು ಅಜನೊಡನೆ ಪ್ರಕೃತಿ ದೇವಿಯೂ ಅಳತೊಡಗಿದಳು. ಪಕ್ಕದ ಸರೋವರದಲ್ಲಿದ್ದ ಹಕ್ಕಿಗಳೂ ಸಮಾನ ಶೋಕವನ್ನು ಸೂಚಿಸುವಂತೆ ಆರ್ತನಾದ ವನ್ನು ಗೈದುವು.—

ಉಭಯೋರಪಿ ಪಾರ್ಶ್ವವರ್ತಿನಾಂ
ತುಮುಲೇನಾರ್ತರವೇಣ ವೇಜಿತಾಃ ।
ವಿಹಗಾಃ ಕಮಲಾಕರಾಲಯಾಃ
ಸಮದುಃಖಾ ಇವ ತತ್ರ ಚುಕ್ರುಶುಃ ॥

ರಘು. ೮-೩೯.

---

## ೭. ಕವಿತಾಸಾಮರ್ಥ್ಯ—ವರ್ಣನಾಶಕ್ತಿ

ಕಾಳಿದಾಸನ ಕಾವ್ಯಗಳ ರಮ್ಯತೆಗೆ ಪ್ರಬಲವಾದೊಂದು ಕಾರಣವೇನೆಂದರೆ ಅವುಗಳಲ್ಲಿ ಬರುವ ಮನೋಹರವಾದ ವರ್ಣನೆಗಳು. ಈ ವರ್ಣನೆಗಳಲ್ಲಿ ನಾವು ಕಾಳಿದಾಸನ ಕಲ್ಪನಾಶಕ್ತಿ, ಊಹಾಶಕ್ತಿ ಮತ್ತು ವಸ್ತುನಿರ್ವರ್ಣನಶಕ್ತಿಯನ್ನು ನೋಡಬಹುದು. ಕವಿಯ ಹಿರಿದಾದ ವಸ್ತುಸೌಂದರ್ಯ ಜ್ಞಾನವೇ ಈತನ ವರ್ಣನೆಗಳ ಸೊಗಸಿಗೆ ಕಾರಣ. ವಸಂತ

ಋತುವಿನಲ್ಲಿ ಪ್ರಕೃತಿದೇವಿಯ ಸೊಬಗನ್ನು ಕವಿ ಬಾರಿಬಾರಿಗೂ ತನ್ನ ಕಾವ್ಯಗಳಲ್ಲಿ ಎಷ್ಟು ರಮ್ಯವಾಗಿ ಬಣ್ಣಿಸುವನು !

ಕಾಳಿದಾಸನಿಗೆ ಪ್ರಕೃತಿಸೌಂದರ್ಯವನ್ನು ಅನುಭವಿಸುವ ಕಣ್ಣಿತ್ತೆಂದು ಈ ಪದ್ಯದಿಂದ ತಿಳಿಯಬಹುದು—

ನೀಪಂ ದೃಷ್ಟ್ವಾ ಹರಿತಕಪಿಶಂ ಕೇಸರೈರರ್ಧರೂಢೈ-
ರಾವಿರ್ಭೂತಪ್ರಥಮಮುಕುಲಾಃ ಕಂದಲೀಶ್ಚಾನುಕಚ್ಛಮ್ ।
ಜಗ್ಧ್ವಾಽರಣ್ಯೇಷ್ವಧಿಕಸುರಭಿಂ ಗಂಧಮಾಘ್ರಾಯ ಚೋರ್ವ್ಯಾಃ
ಸಾರಂಗಾಸ್ತೇ ಜಲಲವಮುಚಃ ಸೂಚಯಿಷ್ಯಂತಿ ಮಾರ್ಗಮ್ ॥

ಪೂ.ಮೇ. ೨೧.

ಪದ್ಯದಲ್ಲಿ ಕವಿ ಮಳೆಗಾಲದ ಪ್ರಾರಂಭವೇಳೆಯ ಚಿತ್ರವೊಂದನ್ನು ವರ್ಣಿಸುತ್ತಾನೆ. ಆಗ ಕದಂಬ ಪುಷ್ಪವು ಅರ್ಧಂಬರ್ಧ ಬೆಳೆದು ಪುಷ್ಪರೇಣುವಿನಿಂದ ಕೂಡಿ ಹಸುರು ಮತ್ತು ಬೂದಿಯ ಬಣ್ಣವನ್ನು ಹೊಂದಿರುವುದು. ದಡಗಳಲ್ಲಿ ಹೊಸದಾಗಿ ಹುಟ್ಟಿದ ಮೊಗ್ಗಿನಿಂದಲೂ ಎಲೆಗಳಿಂದಲೂ ಶೋಭಿಸುವ ಬಾಳೆಯಮರಗಳು; ಭೂಮಿಯು ಮನೋಹರವಾದ ಗಂಧವನ್ನು ಬೀರುವುದು-ಕಾಳಿದಾಸನಿಗೆ ಇವೆಲ್ಲವೂ ಸ್ವಂತ ಅನುಭವ. ಆತನು ಇತರರಂತೆ ಕವಿಸಮಯ ಪಂಜರದಲ್ಲಿ ಪೂರ್ತ ಸಿಕ್ಕಲಿಲ್ಲ. ಕಾಳಿದಾಸನು ಅನೇಕಬಾರಿ ತಾನು ಕಂಡ ಪದಾರ್ಥಗಳಿಗೆ ತನ್ನ ಕಲ್ಪನಾಶಕ್ತಿಯಿಂದ ಹೊಸಬಣ್ಣ ಕೊಟ್ಟು ವರ್ಣಿಸುವನು. ಆದರೆ ವಸ್ತುವನ್ನು ಸಹಜವಾಗಿ ವರ್ಣಿಸುವುದರಲ್ಲಿ ಆತ ಅಪ್ರತಿಮನಾದ ಕವಿ. ಕುಮಾರಸಂಭವದ ಒಂಬತ್ತನೆಯ ಸರ್ಗದಲ್ಲಿ ಪಾರಿವಾಳ ಪಕ್ಷಿಯನ್ನು ಈ ರೀತಿ ವರ್ಣನೆಮಾಡುತ್ತಾನೆ–

ಸುಕಾಂತಕಾಂತಾಮಣಿತಾನುಕಾರಂ
ಕೂಜಂತಮಾಘೂರ್ಣಿತರಕ್ತನೇತ್ರಂ ।
ಪ್ರಸ್ಫಾರಿತೋನ್ನಮ್ರವಿನಮ್ರಕಂಠಂ
ಮುಹುರ್ಮುಹುರ್ನ್ಯಂಚಿತಚಾರುಪುಚ್ಛಮ್ ॥

ವಿಶೃಂಖಲಂ ಪಕ್ಷತಿಯುಗ್ಮವಿಸ್ತ-
ದ್ದಧಾನಮಾನಂದಗತಿಂ ಮದೇನ ।
ಶುಭ್ರಾಂಶುವರ್ಣಂ ಜಟಿಲಾಗ್ರಪಾದ-
ಮಿತಸ್ತತೋಮಂಡಲಕೈಶ್ಚರಂತಮ್ ॥

ಹಕ್ಕಿಯು ತನ್ನ ಕೆಂಪಾದ ಕಣ್ಣುಗಳನ್ನು ಇತ್ತಲತ್ತ ತಿರುಗಿಸುತ್ತ ಮನೋಹರವಾಗಿ ಶಬ್ದಮಾಡುತ್ತಿದ್ದಿತು. ಪದೇಪದೇ ಸೊಬಗಿನ ತನ್ನ ಪುಕ್ಕವನ್ನು ಅಲ್ಲಾಡಿಸುತ್ತ, ರಮ್ಯವಾದ ತನ್ನ ಕಂಠವನ್ನು ಮೇಲಕ್ಕೂ ಕೆಳಕ್ಕೂ ಆಡಿಸುತ್ತಾ ಕುಳಿತಿದ್ದಿತು. ಬಂಧನವನ್ನರಿಯದ ಈ ಹಕ್ಕಿಯ ಮದದಿಂದ ಕೂಡಿದ ಗಮನವು ಮನೋಮೋಹಕವಾಗಿದ್ದಿತು. ಚಂದ್ರನಂತೆ ಬಿಳುಪಾದ ವರ್ಣವುಳ್ಳ ಪಾರಿವಾಳದ ಕಾಲುಗಳು ಜಟೆಯಿಂದ ಕೂಡಿದ್ದುವು. ಹಕ್ಕಿಯು ಮಂಡಲಾಕಾರವಾಗಿ ಸುತ್ತುತ್ತಿದ್ದುದೇ ಒಂದು ನೋಟ.

ಕಾಳಿದಾಸನು ಯಾವ ವಸ್ತುವನ್ನು ವರ್ಣಿಸುವನೋ ಅದು ನಮ್ಮ ಕಣ್ಣ ಮುಂದೆ ಕಟ್ಟಿದಂತೆ ನಿಲ್ಲುವುದು. ಇದು ಕಾಳಿದಾಸನ ವರ್ಣನೆಯ ಒಂದು ವಿಶೇಷ ಗುಣ.

ಅದ್ಭುತವಾದ ವಸ್ತುಗಳನ್ನು ವರ್ಣಿಸುವುದರಲ್ಲಿ ಕಾಳಿದಾಸನು ಬಹು ಚತುರ—

ಅಸ್ತ್ಯುತ್ತರಸ್ಯಾಂ ದಿಶಿ ದೇವತಾತ್ಮಾ
ಹಿಮಾಲಯೋ ನಾಮ ನಗಾಧಿರಾಜಃ ।
ಪೂರ್ವಾಪರೌ ತೋಯನಿಧೀ ವಗಾಹ್ಯ
ಸ್ಥಿತಃ ಪೃಥಿವ್ಯಾ ಇವ ಮಾನದಂಡಃ ॥ ಕುಮಾ. ೧-೧.

ಹಿಮಾಲಯ ಪರ್ವತವು ಒಂದು ದೊಡ್ಡ 'ಅಳತೆಯ ಕಡ್ಡಿಯಂತೆ'! ಈ ಭೂಮಿಯನ್ನೇ ಅಳೆಯುವ ಅಭಿಪ್ರಾಯ ದಿಂದಲೋ ಎಂಬಂತೆ, ಉತ್ತರದಿಕ್ಕಿನ ಈ ಮಹಾಪರ್ವತವು ತನ್ನ ಒಂದು ಕೊನೆಯನ್ನು ಪೂರ್ವ ಸಮುದ್ರದಲ್ಲಿಯೂ ಮತ್ತೊಂದು ಕೊನೆಯನ್ನು ಪಶ್ಚಿಮಸಮುದ್ರದಲ್ಲಿಯೂ ಚಾಚಿ ನಿಂತಿದೆ! ಈ ವರ್ಣನೆಯಿಂದಲೂ ಪದ್ಯದಲ್ಲಿ ಬರುವ "ಪೃಥಿವ್ಯಾ ಇವ ಮಾನದಂಡಃ" ಎಂಬ ವಾಕ್ಯಾಂಶದಿಂದಲೂ ನಮಗೆ ಹಿಮಾಲಯಪರ್ವತದ ವಿಸ್ತಾರವೂ ಔನ್ನತ್ಯವೂ ಭಾಸವಾಗುತ್ತದೆ.

ಕಾಳಿದಾಸನು ತನಗಿಂತ ಈಚಿನ ಕವಿಗಳಂತೆ ವಸ್ತುವಿನ ಪ್ರತಿಯೊಂದು ಅಂಗವನ್ನೂ ಔಚಿತ್ಯವಿಚಾರಿ ವರ್ಣಿಸಹೋಗು ವುದಿಲ್ಲ. ನಮ್ಮ ಊಹೆಗೇ ಬಿಟ್ಟುಬಿಡುತ್ತಾನೆ:

ಸರ್ವೋಪಮಾದ್ರವ್ಯ ಸಮುಚ್ಚಯೇನ
ಯಥಾಪ್ರದೇಶಂ ವಿನಿವೇಶಿತೇನ ।
ಸಾ ನಿರ್ಮಿತಾ ವಿಶ್ವಸೃಜಾ ಪ್ರಯತ್ನಾ-
ದೇಕಸ್ಥ ಸೌಂದರ್ಯದಿದೃಕ್ಷಯೇವ ॥

ಕುಮಾ. ೧-೪೯.

ಇದು ಪಾರ್ವತಿಯ ಸೌಂದರ್ಯ ವರ್ಣನೆ. ಬ್ರಹ್ಮನಿಗೆ ಎಲ್ಲ ಸುಂದರ ವಸ್ತುಗಳನ್ನೂ ಒಟ್ಟುಗೂಡಿಸಿ ಒಂದೆಡೆ ನೋಡಬೇ ಕೆಂಬಾಸೆ ಉಂಟಾಯಿತಂತೆ. ಆಗ ಆತನು ಉಪಮಾನದ್ರವ್ಯ ಗಳಾದ ಚಂದ್ರ ಕಮಲಾದಿವಸ್ತುಗಳನ್ನು ಶೇಖರಿಸಿ, ಒಂದೊಂ ದನ್ನೂ ಉಚಿತ ಭಾಗಗಳಲ್ಲಿಟ್ಟು ಒಂದು ರೂಪರತ್ನವನ್ನು ಸೃಷ್ಟಿಸಿದನಂತೆ. ಆ ರೂಪರತ್ನವೇ ಪಾರ್ವತಿ! ಈ ವರ್ಣನೆ

ಯಿಂದ ನಾವು ನಮಗೆ ಕಲ್ಪನಾಶಕ್ತಿಯಿರುವಷ್ಟು ಒಂದು ಸ್ತ್ರೀ ರತ್ನವನ್ನು ಮನಸ್ಸಿನಲ್ಲಿ ಸೃಷ್ಟಿಸಿಕೊಳ್ಳಬಹುದು.

ಪ್ರಕೃತಿ ಸೌಂದರ್ಯದ ವರ್ಣನೆಯಲ್ಲಿ ಕಾಳಿದಾಸನು ಯಾವ ಕಲೆಯನ್ನೂ ಕೌಶಲ್ಯವನ್ನೂ ತೋರಿಸುವನೋ ಮನುಷ್ಯ ಸ್ವಭಾವ ನಿರೂಪಣೆಯಲ್ಲಿಯೂ ಅಷ್ಟರಮಟ್ಟಿನ ಕಲೆಯನ್ನೂ ಕೌಶಲ್ಯವನ್ನೂ ತೋರುವನು. ರಘುಕುಲಕಳಂಕನಾದ ಅಗ್ನಿವರ್ಣನ ವರ್ಣನೆ ಇದು :

> ಗೌರವಾದ್ಯದಪಿ ಜಾತು ಮಂತ್ರಿಣಾಂ
> ದರ್ಶನಂ ಪ್ರಕೃತಿಕಾಂಕ್ಷಿತಂ ದದೌ ।
> ತದ್ಗವಾಕ್ಷವಿವರಾವಲಂಬಿನಾ
> ಕೇವಲೇನ ಚರಣೇನ ಕಲ್ಪಿತಮ್ ॥

ರಘು. ೧೯-೭.

ಅಗ್ನಿವರ್ಣನು ಇಂದ್ರಿಯಸುಖದಲ್ಲಿ ಲೀನನಾಗಿ ತನ್ನ ಪ್ರಜೆಗಳ ಹಿತವನ್ನೇ ಗಮನಿಸುತ್ತಿರಲಿಲ್ಲ. ಒಂದು ವೇಳೆ ಮಂತ್ರಿಗಳಲ್ಲಿನ ಗೌರವದಿಂದ ಪ್ರಜೆಗಳಿಗೆ ದರ್ಶನ ಕೊಡಲು ಮನಸ್ಸುಮಾಡಿದರೂ ಕೂಡ, ಕಿಟಕಿಯ ಕಂಡಿಯ ಮೂಲಕ ತನ್ನ ಕಾಲೊಂದನ್ನು ಹೊರಚಾಚುತ್ತಿದ್ದನಂತೆ! ರಾಜದರ್ಶನಕ್ಕಾಗಿ ಬಂದ ಜನರು ಆ ಚಾಚಿದ ಕಾಲನ್ನು ನೋಡಿ ತೃಪ್ತಿಪಡಬೇಕಾಗುತ್ತಿತ್ತು. ಅಗ್ನಿವರ್ಣನ ನೀಚಸ್ವಭಾವವನ್ನು ಇದಕ್ಕಿಂತಲೂ ಒತ್ತಿ ಹೇಳಲಸಾಧ್ಯ.

ಪಾರ್ವತಿಯು ಲಜ್ಜಾಶೀಲೆ ಎಂಬುದನ್ನು ಕವಿ ಒಂದೇ ಮಾತಿನಲ್ಲಿ ವರ್ಣಿಸಿ ಹೇಳುತ್ತಾನೆ :

ಏವಂ ವಾದಿನಿ ದೇವರ್ಷೌ ಪಾರ್ಶ್ವೇ ಪಿತುರಧೋಮುಖೀ |
ಲೀಲಾಕಮಲಪತ್ರಾಣಿ ಗಣಯಾಮಾಸ ಪಾರ್ವತೀ ||

ಕುಮಾ ೬-೮೪.

ಶಿವನಿಗೆ ಪಾರ್ವತಿಯನ್ನು ಕೊಟ್ಟು ಮದುವೆಮಾಡೆಂದು ಸಪ್ತರ್ಷಿಗಳು ಪರ್ವತರಾಜನೊಡನೆ ಹೇಳುತ್ತಿದ್ದಾಗ ಆತನ ಪಕ್ಕದಲ್ಲಿ ನಿಂತಿದ್ದ ಪಾರ್ವತಿ ತಲೆಬಾಗಿ ಕರದಲ್ಲಿದ್ದ ಆಟದ ಕಮಲ ಪುಷ್ಪದ ದಳಗಳನ್ನು ಎಣಿಸುತ್ತಿದ್ದಳಂತೆ! ಪಾರ್ವತಿಯ ಈ ನಡವಳಿಕೆಯು ಆಕೆಯ ಲಜ್ಜೆಯನ್ನೂ ಶಿವನಲ್ಲಿ ಆಕೆಗಿದ್ದ ಪ್ರೇಮವನ್ನೂ ಹೊರಸೂಸುತ್ತದೆ.

ಕಾಳಿದಾಸನು ಮನುಷ್ಯನ ಹೃದಯದಲ್ಲಿ ಉಂಟಾಗುವ ಭಾವಗಳನ್ನು ಬಹು ಸ್ವಾರಸ್ಯವಾಗಿಯೂ ಮನಮುಟ್ಟುವಂತೆಯೂ ವರ್ಣಿಸಬಲ್ಲ. ಪಾರ್ವತಿಯೊಡನೆ ಮದುವೆಗಾಗಿ ತವಕಪಡುವ ಈಶ್ವರನ ವರ್ಣನೆ ಇದು.

ಪಶುಪತಿರಪಿ ತಾನ್ಯಹಾನಿ ಕೃಚ್ಛ್ರಾ-
ದಗಮಯದದ್ರಿಸುತಾಸಮಾಗಮೋತ್ಕಃ |
ಕಮಪರಮವಶಂ ನ ವಿಪ್ರಕುರ್ಯು-
ರ್ವಿಭುಮಪಿ ತಂ ಯದಮೀ ಸ್ಪೃಶಂತಿ ಭಾವಾಃ ||

ಕುಮಾ. ೬-೯೫.

ಸಪ್ತರ್ಷಿಗಳು ಪರ್ವತರಾಜನ ಬಳಿಯಿಂದ ಶಿವನಲ್ಲಿಗೆ ಬಂದು, ಮೂರು ದಿನಗಳ ಅನಂತರ ವಿವಾಹಮುಹೂರ್ತವನ್ನು ಗೊತ್ತು ಮಾಡಿದೆಯೆಂದು ಶಿವನಿಗೆ ತಿಳಿಸುವರು. ಶಿವನಿಗಾದರೋ ಆ ಮೂರು ದಿನಗಳನ್ನು ಕಳೆಯುವುದು ಮೂರು ಯುಗಗಳಂತೆ ತೋರಿತು. "ಹೀಗೆ ಶಿವನಂತಹ ವಿಭುವೇ ಈ ಶೃಂಗಾರ ಭಾವಗಳಿಗೆ ಒಳಗಾದ ಮೇಲೆ ಮಿಕ್ಕವರ ಪಾಡೇನು?" ಎಂಬುದಾಗಿ

ಕೇಳುತ್ತಾನೆ. ಶೃಂಗಾರಭಾವವು ಸರ್ವರನ್ನೂ ವ್ಯಾಪಿಸುವುದೆಂಬ ವಿಷಯವನ್ನು ಹೇಳುವುದಲ್ಲದೆ, ಶಿವನ ಆಗಿನ ಮನದ ಹಂಬಲ ವನ್ನು ಸ್ವಾರಸ್ಯವಾಗಿ ವರ್ಣಿಸಿದ್ದಾನೆ.

ಶಿವನು ಬ್ರಹ್ಮಚಾರಿಯ ವೇಷದಲ್ಲಿ ಪಾರ್ವತಿಯ ಸತ್ವ ಪರೀಕ್ಷೆಗಾಗಿ ಹೊರಟನಷ್ಟೆ. ಪಾರ್ವತಿಯ ಮುಂದೆ ಆವನು ಶಿವ ದೂಷಣೆಯನ್ನು ಮಾಡಲು ಆಕೆ ಆ ದುಷ್ಟವಾಕ್ಯಗಳನ್ನು ಕೇಳ ಲಾರದೆ ಸ್ಥಳ ಬಿಟ್ಟು ಓಡಲು ಮೊದಲುಮಾಡಿದಳು. ಅಷ್ಟರಲ್ಲಿ ಸುಪ್ರೀತನಾದ ಶಿವನು ತನ್ನ ನಿಜಸ್ವರೂಪವನ್ನು ತಳೆದು ಆಕೆಯ ಕೈ ಹಿಡಿದನು. ಪಾರ್ವತಿ ಹಿಂದಿರುಗಿ ನೋಡಿದಳು——ಶಿವನನ್ನು ಕಂಡಳು——ಥಟ್ಟನೆ ನಿಂತಳು. ಹೊರಡಲುದ್ದೇಶಿಸಿ ಒಂದು ಕಾಲ ನ್ನೆತ್ತಿ ಮುಂದೆ ಹೆಜ್ಜೆಯಿಡುವುದರಲ್ಲಿಯೇ ಶಿವನನ್ನು ಕಂಡದ್ದ ರಿಂದ, ಎತ್ತಿದ ಪಾದವನ್ನು ಕೆಳಗಿಡದೆ ಪಾರ್ವತಿ ಶಿವನನ್ನು ನೋಡುತ್ತ ಸ್ತಬ್ಧಳಾಗಿ ನಿಂತುಬಿಟ್ಟಳಂತೆ! ಈ ಚಿತ್ರವನ್ನು ಮನಸಟ್ಟುಮಾಡಿಕೊಡುವುದಕ್ಕೆ ಕವಿ ದೃಷ್ಟಾಂತವೊಂದನ್ನು ಕೊಡುತ್ತಾನೆ. ರಭಸದಿಂದೋಡಿ ಬರುವ ನದಿಯ ಪ್ರವಾಹವು ಮಾರ್ಗದಲ್ಲಿ ಒಂದು ಪರ್ವತವನ್ನು ಸಂಘರ್ಷಿಸಿದರೆ ಹೇಗೆ ಹಿಂದೆ ಹೋಗಲೂ ಮುಂದೆ ನುಗ್ಗಲೂ ಸಾಧ್ಯವಿಲ್ಲದೆ ತತ್ತರಿ ಸುವುದೋ ಅದರಂತೆ ಪಾರ್ವತಿ ಮುಂದೆ ಹೋಗಲೂ ಹಿಂದಿರು ಗಲೂ ತೋಚದವಳಾದಳು! ವರ್ಣನೆಯಲ್ಲಿ ಕ್ರೋಧ, ಆನಂದ, ಔತ್ಸುಕ್ಯ, ಲಜ್ಜೆ ಮತ್ತು ಕಿಂಕರ್ತವ್ಯತಾಮೂಢತೆ-ಇವೆಲ್ಲವೂ ಧ್ವನಿತವಾಗಿರುವುದಲ್ಲದೆ ಆ ಸಮಯದ ಪಾರ್ವತಿಯ ಮೂರ್ತಿಯು ನಮ್ಮ ಮನಸ್ಸಿನಲ್ಲಿ ಚಿತ್ರಿಸಿದಂತಿದೆ. ಪದ್ಯದಲ್ಲಿ ಕಾಳಿದಾಸನ ವರ್ಣನಾಚಾತುರ್ಯವು ತನ್ನ ಮುಗಿಲನ್ನು ಮುಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು :

ತಂ ವೀಕ್ಷ್ಯ ವೇಪಥುಮತೀ ಸರಸಾಂಗಯಷ್ಟಿ-
ರ್ನಿಕ್ಷೇಪಣಾಯ ಪದಮುದ್ಧೃತಮುದ್ವಹಂತೀ |
ಮಾರ್ಗಾಚಲವ್ಯತಿಕರಾಕುಲಿತೇವ ಸಿಂಧುಃ
ಶೈಲಾಧಿರಾಜತನಯಾ ನ ಯಯೌ ನ ತಸ್ಥೌ ||

ಕುಮಾ. ೫ — ೮೫.

---

# ೮. ಕವಿತಾಸಾಮರ್ಥ್ಯ-ಶೈಲಿ

ಕಾಳಿದಾಸನ ಕಾವ್ಯಗಳ ರಮ್ಯತೆಗೆ ಆತನ ವರ್ಣನಾಶಕ್ತಿಗಿಂತಲೂ ಶೈಲಿಯೇ ಪ್ರಬಲವಾದ ಕಾರಣ. ಆತನು ಬರವಣಿಗೆಯ ಬಹು ಮುಖ್ಯವಾದ ಒಂದು ಗುಟ್ಟನ್ನು ತಿಳಿದಿದ್ದನು. ಶಬ್ದಕ್ಕೂ ಅರ್ಥಕ್ಕೂ ಇರುವ ನಿಜವಾದ ಮತ್ತು ನಿಕಟವಾದ ಸಂಬಂಧಜ್ಞಾನವೇ ಈ ಗುಟ್ಟು. ಆದುದರಿಂದಲೇ ಕಾಳಿದಾಸನು ಎಲ್ಲಿಯೂ ಅರ್ಥವಿಲ್ಲದ ಶಬ್ದಗಳನ್ನುಪಯೋಗಿಸುವುದಿಲ್ಲ. ಇವನಲ್ಲಿ ಶಬ್ದಾಡಂಬರವಿಲ್ಲ. ಕಾಳಿದಾಸನ ಶೈಲಿ ಅಥವಾ ರೀತಿಯನ್ನು ಆಲಂಕಾರಿಕರು ವೈದರ್ಭೀ ಜಾತಿಗೆ ಸೇರಿದುದೆಂದು ಹೇಳುತ್ತಾರೆ. ಈತನ ಬರವಣಿಗೆಯಲ್ಲಿ ವೈದರ್ಭೀ ರೀತಿಯ ಮುಖ್ಯಲಕ್ಷಣವಾದ ಸಮಾಸವಿಲ್ಲದ ಲಲಿತವಾದ ರಚನೆಯನ್ನು ಕಾಣುತ್ತೇವೆ. ಉದಾಹರಣೆಗಾಗಿ:

ಮಂದಂ ಮಂದಂ ನುದತಿ ಪವನಶ್ಚಾನುಕೂಲೋ ಯಥಾ ತ್ವಾಂ
ವಾಮಶ್ಚಾಯಂ ನದತಿ ಮಧುರಂ ಚಾತಕಸ್ತೇ ಸಗಂಧಃ |
ಗರ್ಭಾಧಾನಕ್ಷಣಪರಿಚಯಾನ್ನೂನಮಾಬದ್ಧಮಾಲಾಃ
ಸೇವಿಷ್ಯಂತೇ ನಯನಸುಭಗಂ ಖೇ ಭವಂತಂ ಬಲಾಕಾಃ ||

ಪೂ.-ಮೇ. ೧೦.

ಯಕ್ಷನು ಮೇಘವನ್ನು ಕುರಿತು ಆಡುವ ಮಾತು: ಎಲೈ ಮೇಘವೇ, ನೀನು ಹೊರಡಲಾಗಿ, ಅನುಕೂಲವಾದ ಮಾರುತವು ನಿನ್ನನ್ನು ಮೆಲ್ಲನೆ ಮುಂದೆ ಮುಂದೆ ಒಯ್ಯುವುದು. ನಿನ್ನ ಎಡಗಡೆಯಲ್ಲಿ ಗರ್ವದಿಂದ ಕೂಡಿದ ಚಾತಕಪಕ್ಷಿಗಳು ಮಧುರವಾಗಿ ಗಾನಮಾಡುವುವು. ಹೆಣ್ಣು ಬಕಪಕ್ಷಿಗಳು ಸಾಲುಗಟ್ಟಿ ಹಾಡುತ್ತ, ನೋಡಲು ಮನೋಹರನಾದ ನಿನ್ನನ್ನು ಆನಂದಗೊಳಿಸುವುವು.

ಈ ಪದ್ಯದಲ್ಲಿ ಪದಗಳೆಲ್ಲವೂ ಮೃದುವಾಗಿವೆ. ದೊಡ್ಡ ಶಬ್ದಗಳಿಲ್ಲ, ಸಮಾಸದ ಆಡಂಬರವಿಲ್ಲ, ಮತ್ತು ಪದರಚನೆಯಲ್ಲಿ ಅನುಚಿತವಾದ ಬಿಗಿಯಿಲ್ಲ. ಪದ್ಯವನ್ನು ಅರ್ಥಮಾಡಿಕೊಂಡಲ್ಲಿ ಕವಿಯು ಉಪಯೋಗಿಸಿರುವ ಶಬ್ದಗಳಲ್ಲಿ ಎಷ್ಟು ಮಾಧುರ್ಯವಿದೆ ಎಂಬುದು ತಿಳಿಯುತ್ತದೆ. ಅಲ್ಲದೆ ಪದ್ಯವನ್ನು ಓದಲಾಗಿ ಮೊದಲಿನಿಂದ ಕೊನೆಯ ವರೆಗೂ ಒಂದೇ ರೀತಿಯಾದ ಸುಲಭವಾದ ಪದರಚನೆಯನ್ನು ನೋಡುತ್ತೇವೆ. 'ಮಂದಂ ಮಂದಂ' 'ನುದತಿ' 'ನದತಿ' 'ಸಗಂಧಃ' 'ನಯನಸುಭಗಂ'—ಇತ್ಯಾದಿ ಪದಗಳು ಎಷ್ಟು ಸರಳವಾದವುಗಳು! ಈ ಪದಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ನಾವು ಕೋಶಗಳನ್ನು ತಿರಿವಿ ಹಾಕಬೇಕಾದ ಆವಶ್ಯಕತೆಯಿಲ್ಲ. ಶಬ್ದವನ್ನು ಓದುವಾಗಲೇ ಅರ್ಥ ಮನಸ್ಸಿಗೆ ತಟ್ಟನೆ ಹೊಳೆಯುತ್ತದೆ. ಮೋಡದ ಗಮನ, ಚಾತಕದ ಗಾನ, ಮತ್ತು ಬಕಗಳ ವರ್ತನೆ ಇವುಗಳನ್ನು ಕವಿ ಸ್ವಭಾವಸಿದ್ಧವಾಗಿರುವ ಹಾಗೆಯೇ ವರ್ಣಿಸಿದ್ದಾನೆ, ತೊಡಕಾದ ಅಲಂಕಾರಾದಿಗಳ ಮೂಲಕವಲ್ಲ. ಒಟ್ಟಿನಲ್ಲಿ ಹೇಳುವುದನ್ನು ಗಂಭೀರವಾಗಿ ಹೇಳುತ್ತಾನೆ.

ಕಾಳಿದಾಸನು ಪದಗಳನ್ನು ಬಹು ಸುಂದರವಾಗಿ ಜೋಡಿಸುತ್ತಾನೆ. ಪದಗಳು ಒಂದಕ್ಕೊಂದು ಸ್ನೇಹಭಾವದಿಂದ ಬೆರೆತು ಮೆರೆಯುತ್ತವೆ. ಪದಕ್ರಮವನ್ನು ನಾವು ಬದಲಾಯಿಸುವಂತಿಲ್ಲ. ಒಂದು ವೇಳೆ ಅದೇ ಅರ್ಥ ಕೊಡುವ ಬೇರೆ ಪದಗಳನ್ನು ಉಪಯೋಗಿಸಿದರೆ ಪದ್ಯದಲ್ಲಿ ಹಳ್ಳ ದಿಣ್ಣೆಗಳು ಕಾಣುವುವು. ಕಾಳಿದಾಸನ ಬರವಣಿಗೆಯಲ್ಲಿ ಅರ್ಥವನ್ನೂ ಅರ್ಥದ ಸ್ವಾರಸ್ಯವನ್ನೂ ಬಹು ಜಾಗ್ರತೆಯಾಗಿ ಗ್ರಹಿಸಬಹುದು.

ಕಾಳಿದಾಸನಿಗೆ ಕೇವಲ ಅಲಂಕಾರದಮೇಲೆ ಅಷ್ಟು ಅಭಿರುಚಿಯಿಲ್ಲ. ಅದರಲ್ಲೂ ಶಬ್ದಾಲಂಕಾರವನ್ನು ಕಂಡರಾಗದು. ಹೀಗೆಂದ ಮಾತ್ರಕ್ಕೆ ಆತನ ಕಾವ್ಯಗಳಲ್ಲಿ ಶಬ್ದಾಲಂಕಾರಗಳು ಇಲ್ಲವೇ ಇಲ್ಲವೆಂಬರ್ಥವಲ್ಲ. ರಘುವಂಶದ ಒಂಬತ್ತನೆಯ ಸರ್ಗದಲ್ಲಿ ಯಮಕಾಲಂಕಾರವನ್ನು ನೋಡಬಹುದು. ಉದಾಹರಣೆಗಾಗಿ: 'ಯಮವತಾಮವತಾಂ ಚ ಧುರಿ ಸ್ಥಿತಃ', 'ಸುವದನಾವದನಾಸವಸಂಭೃತಃ' ಇತ್ಯಾದಿ. ಅಂದರೆ ಉಚಿತವಾದೆಡೆಗಳಲ್ಲಿ ಮಾತ್ರ ಕಾಳಿದಾಸನು ಶಬ್ದಾಲಂಕಾರವನ್ನು ಉಪಯೋಗಿಸುತ್ತಾನೆ. ಇತರ ಕವಿಗಳು ನೂರಕ್ಕೆ ತೊಂಬತ್ತು ಪಾಲು ಶಬ್ದಾಲಂಕಾರವನ್ನುಪಯೋಗಿಸಿದರೆ ಕಾಳಿದಾಸ ಕೇವಲ ನಾಲ್ಕೈದುಪಾಲು ಉಪಯೋಗಿಸುವನು.

ಅರ್ಥಾಲಂಕಾರಗಳಲ್ಲಿ ಕಾಳಿದಾಸನಿಗೆ ನಂಬಿಕೆ ಬಹಳ; ಅದರಲ್ಲೂ ಉಪಮಾಲಂಕಾರದಲ್ಲಿ. ಕಾಳಿದಾಸನು ಉಪಮಾಲೋಲನೆಂಬುದು "ಉಪಮಾ ಕಾಲಿದಾಸಸ್ಯ" ಎಂಬ ಪ್ರಸಿದ್ಧೋಕ್ತಿಯಿಂದ ಸರ್ವವಿದಿತವಾಗಿದೆ. ಒಂದೆರಡು ಉದಾಹರಣೆಗಳಿಂದ ಈತನ ಉಪಮೆಗಳ ರಮ್ಯತೆಯನ್ನು ಅನುಭವಿಸಬಹುದು:

**ಸಂಚಾರಿಣೀ ದೀಪಶಿಖೇವ ರಾತ್ರೌ**
**ಯಂ ಯಂ ವ್ಯತೀಯಾಯ ಪತಿಂವರಾ ಸಾ ।**
**ನರೇಂದ್ರಮಾರ್ಗಾಟ್ಟ ಇವ ಪ್ರಪೇದೇ**
**ವಿವರ್ಣಭಾವಂ ಸ ಸ ಭೂಮಿಪಾಲಃ ॥**

ರಘು. ೬-೬೭.

ಇಂದುಮತಿಯ ಸ್ವಯಂವರಕ್ಕೆ ಅನೇಕರಾಜರು ಬಂದಿದ್ದರಷ್ಟೆ. ಅವರೆಲ್ಲರೂ ಸ್ವಯಂವರಮಂಟಪದಲ್ಲಿ ಆಸನಾರೂಢರಾಗಿರಲು ಇಂದುಮತಿಯು ಸಖೀಸಮೇತಳಾಗಿ ಒಬ್ಬೊಬ್ಬ ರಾಜನನ್ನೂ ನೋಡುತ್ತ ಬಂದಳು. ಯಾವ ರಾಜನೆದುರಿಗೆ ಇಂದುಮತಿಯು ಬಂದು ನಿಲ್ಲುತ್ತಿದ್ದಳೋ, ಆ ರಾಜನು ತನ್ನನ್ನು ವರಿಸುವಳೆಂಬ ಭಾವನೆಯನ್ನು ಹೊಂದುತ್ತಿದ್ದನು. ಆದುದರಿಂದಲೇ ಆ ರಾಜನ ಮುಖವು ಹರುಷದಿಂದ ಅರಳುತ್ತಿತ್ತು. ಆದರೆ ಇಂದುಮತಿಯು ಆ ರಾಜನನ್ನು ಒಪ್ಪದೆ ಮುಂದಿನ ಮತ್ತೊಬ್ಬ ರಾಜಕುಮಾರನ ಬಳಿಗೆ ಸಾರಲು ಹಿಂದುಳಿದ ರಾಜನ ಮುಖವು ಆಶಾಭಂಗದಿಂದ ಒಣಗುಂದುತ್ತಿದ್ದಿತು. ಇದನ್ನು ಕವಿ ಉಪಮೆಯ ಮೂಲಕ ಸ್ಪಷ್ಟಪಡಿಸುತ್ತಾನೆ. ಸಂಚರಿಸುವ ಒಂದು ದೀವಟಿಗೆಯನ್ನು ಊಹಿಸಿಕೊಳ್ಳಿ. ಈ ದೀವಟಿಗೆಯು ರಾಜಬೀದಿಯಲ್ಲಿ ಯಾವ ಮನೆಯ ಮುಂದೆ ಬಂದು ನಿಲ್ಲುವುದೋ ಆ ಮನೆಯ ಉಪ್ಪರಿಗೆ ಬೆಳಕಾಗುತ್ತಿತ್ತು. ದೀವಟಿಗೆಯು ಮುಂದಿನ ಮನೆಯ ಬಳಿ ಹೋಗಲು, ಹಿಂದಿನ ಮನೆಯ ಉಪ್ಪರಿಗೆಯು ಕಾಂತಿಹೀನವಾಗುತ್ತಿತ್ತು. ಇಲ್ಲಿ ಇಂದುಮತಿಯನ್ನು ದೀಪಶಿಖೆಗೂ ರಾಜಕುವರರ ಮುಖಗಳನ್ನು ರಾಜಬೀದಿಯ ಮನೆಗಳ ಮೇಲ್ಭಾಗಕ್ಕೂ ಹೋಲಿಸಿ, ಇಂದುಮತಿಯು ಮುಂದೆ ಬಂದು ನಿಂತಾಗ ರಾಜಕುಮಾರರ ಗೆಲುವಿನ ಮುಖ

ವನ್ನೂ, ಆಕೆ ಅಲ್ಲಿಂದ ಮುಂದೆ ಸರಿದಾಗ ಹಿಂದಿದ್ದ ರಾಜ ಕುಮಾರರ ಮುಖವು ಬೆಪ್ಪಾಗುವುದನ್ನೂ ವಾಚಕರ ಮನ ಸ್ಸಿಗೆ ಹಿಡಿಯುವಂತೆ ಹೇಳಿದ್ದಾನೆ.

ಕಾಳಿದಾಸನಿಗೆ ಅರ್ಥಾಂತರನ್ಯಾಸಾಲಂಕಾರದಲ್ಲಿ ಪಕ್ಷಪಾತ. ವಿಶೇಷಾರ್ಥದಿಂದ ಸಾಮಾನ್ಯಾರ್ಥವು ಸಮರ್ಥಿತವಾದರೆ ಅಥವಾ ಸಾಮಾನ್ಯಾರ್ಥದಿಂದ ವಿಶೇಷಾರ್ಥವು ಸಮರ್ಥಿತ ವಾದರೆ ಅಂತಹ ಉಕ್ತಿಗೆ ಅರ್ಥಾಂತರನ್ಯಾಸವೆಂದು ಹೆಸರು. ಉದಾಹರಣೆ :

ಶೈಲಃ ಸಂಪೂರ್ಣಕಾಮೋಽಪಿ ಮೇನಾಮುಖಮುದೈಕ್ಷತ ।
ಪ್ರಾಯೇಣ ಗೃಹಿಣೀನೇತ್ರಾಃ ಕನ್ಯಾರ್ಥೇಷು ಕುಟುಂಬಿನಃ ॥

ಹಿಮವಂತನು ಮಗಳನ್ನು ಶಿವನಿಗೆ ಕೊಡಲೊಪ್ಪಿದರೂ ಸಹ ತನ್ನ ಹೆಂಡತಿಯ ಅಭಿಪ್ರಾಯವನ್ನು ತಿಳಿಯಲು ಆಕೆಯ ಮುಖವನ್ನು ನೋಡಿದನು. ಏಕೆಂದರೆ ಸಾಮಾನ್ಯವಾಗಿ ಗೃಹಸ್ಥರು ಹೆಣ್ಣುಮಕ್ಕಳ ವಿಷಯಗಳಲ್ಲಿ ತಮ್ಮ ಹೆಂಡತಿಯರ ಅಭಿಮತವನ್ನೇ ಅನುಸರಿಸುತ್ತಾರೆ.— ಈ ಪದ್ಯದ ಮೊದಲನೆಯ ಪಾದದಲ್ಲಿ ಪರ್ವತರಾಜ ಮತ್ತು ಮೇನಕೆಯರಿಗೆ ಸಂಬಂಧಿಸಿದ ವಿಷಯವು ಪ್ರಸ್ತಾಪಿಸಲ್ಪಟ್ಟಿದೆ. ಇದು ವಿಶೇಷವಾಕ್ಯ. ಈ ವಿಶೇಷ ವಾಕ್ಯವು ಎರಡನೆಯ ಪಾದದಲ್ಲಿರುವ ಸಾಮಾನ್ಯವಾಕ್ಯ ದಿಂದ ಅಂದರೆ ಗೃಹಸ್ಥರ ಸಾಮಾನ್ಯ ನಡೆವಳಿಕೆಯಿಂದ ಸಮ ರ್ಥಿಸಲ್ಪಟ್ಟಿದೆ. ಕಾಳಿದಾಸನ ಕಾವ್ಯಗಳಲ್ಲಿ ಇಂಥ ಹೃದ್ಯವಾದ ಅರ್ಥಾಂತರನ್ಯಾಸಗಳು ಹೇರಳವಾಗಿ ಸಿಗುತ್ತವೆ. ಇವಲ್ಲದೆ ಕಾಳಿ ದಾಸನ ಕೆಲವು ವಾಕ್ಯಗಳು ನಾಣ್ಣುಡಿಗಳಾಗಿ ಪರಿಣಮಿಸಿವೆ : 'ಪ್ರಿಯೇಷು ಸೌಭಾಗ್ಯ ಫಲಾ ಹಿ ಚಾರುತಾ' ಒಳ್ಳೆಯ

ಪತಿಯನ್ನು ಪಡೆಯುವ ಸೌಭಾಗ್ಯವೇ ಸೌಂದರ್ಯದ ಪ್ರತಿಫಲ—
‘ ವಿಷವೃಕ್ಷೋಽಪಿ ಸಂವರ್ಧ್ಯ ಸ್ವಯಂ ಛೇತ್ತುಂ ಅಸಾಂಪ್ರತಂ ’
ತನ್ನಿಂದ ಅಭಿವೃದ್ಧಿಗೊಳಿಸಲ್ಪಟ್ಟದ್ದು ವಿಷವೃಕ್ಷವಾದರೂ
ಅದನ್ನು ಕಡಿಯುವುದು ಉಚಿತವಲ್ಲ. ‘ ಕ್ಲೇಶಃ ಫಲೇನ ಹಿ
ಪುನಃ ನವತಾಂ ವಿಧತ್ತೇ ’ ಕಷ್ಟಪಟ್ಟದ್ದಕ್ಕೆ ಫಲವುಂಟಾದರೆ
ಕಷ್ಟ ಮರೆತುಹೋಗುವುದಲ್ಲದೆ ಹೊಸಕಾರ್ಯ ಕೈಗೊಳ್ಳಲು
ಹುರುಪುಂಟಾಗುತ್ತದೆ.

ಈತನ ಬರವಣಿಗೆಯಲ್ಲಿ ಅನೇಕ ಕಡೆ ಶಬ್ದಚಿತ್ರಗಳ
ನ್ನುಳ್ಳ ಪದಗಳನ್ನು ಕಾಣಬಹುದು. ‘ ಮಾರೀಚೋದ್ಭ್ರಾಂತ
ಹಾರೀತಾ ಮಲಯಾದ್ರೇರುಪತ್ಯಕಾಃ ’ ರಘುವು ದಂಡಿನೊ
ಡನೆ “ ಮಲಯಪರ್ವತದ ತಪ್ಪಲುಪ್ರದೇಶಗಳಲ್ಲಿ, ಓಡಾ
ಡುವ ಗಿಳಿಗಳುಳ್ಳ ವಿಸ್ತಾರವಾದ ಮೆಣಸಿನ ತೋಟಗಳಲ್ಲಿ ”
ಬಂದಿಳಿದನು. “ ಸ್ಕಂಧಾನ್ ಲಗ್ನಕುಂಕುಮಕೇಸರಾನ್ ”
“ ಕುಂಕುಮಕೇಸರದಿಂದ ತುಂಬಿದ ಹೆಗ್ಗತ್ತನ್ನು ಒದರುವ ”
ಕುದುರೆಗಳು. ಇತ್ಯಾದಿ.

ಕಾಳಿದಾಸನ ಬರವಣಿಗೆಯಲ್ಲಿ ಪೌರಾಣಿಕ ಪಾತ್ರಗಳ
ಮತ್ತು ಕಥಾಂಶದ ಸ್ಮರಣೆ ಬಾರಿಬಾರಿಗೂ ಬರುತ್ತದೆ. ಉಚಿತ
ವಾದ ಕ್ರಿಯಾಪದಗಳನ್ನು ಆರಿಸುವುದರಲ್ಲಿ ಆತನು ಅಗ್ರಗಣ್ಯ.
ಪದರಚನೆಯನ್ನು ನಾನಾ ವೃತ್ತಗಳಲ್ಲಿ ಮಾಡಬಲ್ಲ. ಸಾಮಾನ್ಯ
ವಾಗಿ ವರ್ಣನೆ ಮಾಡುವಾಗ ಘನ ವೃತ್ತಗಳನ್ನೂ, ಕತೆಯನ್ನು
ಮುಂದುವರಿಸುವಾಗ “ ಆರ್ಯಾ ” ಮತ್ತು “ ಅನುಷ್ಟುಭ್ ”
ಗಳನ್ನೂ ಉಚಿತವಾಗಿ ಉಪಯೋಗಿಸುತ್ತಾನೆ. ಆಯಾ
ರಸಕ್ಕೆ ತಕ್ಕ ವೃತ್ತವನ್ನು ಉಪಯೋಗಿಸಿಕೊಳ್ಳುವನಲ್ಲದೆ,
ಪದಜೋಡಣೆಯನ್ನು ಚೆನ್ನಾಗಿ ಮಾಡುತ್ತಾನೆ. ವಿರಹಾವಸ್ಥೆ

ಯನ್ನು ಸೂಚಿಸುವಾಗ 'ಮಂದಾಕ್ರಾಂತ' ವನ್ನು ಬಳಸಿಕೊಂಡಿರುವುದು ಎಷ್ಟರಮಟ್ಟಿನ ಔಚಿತ್ಯವೆಂಬುದು ಮೊದಲೇ ಸೂಚಿತವಾಗಿದೆ.

ಕಾಳಿದಾಸನ ಶೈಲಿಯ ಬಹು ದೊಡ್ಡ ಗುಣ ಯಾವುದೆಂದರೆ, ಆತನು ಹೇಳಬೇಕಾದುದನ್ನು ಸ್ಪಷ್ಟವಾಗಿ ನೇರವಾಗಿ ಮನಸ್ಸನ್ನು ಹೊಗುವಂತೆ ಹೇಳುವುದೇ. ಅನೇಕವೇಳೆ ತನ್ನ ಅಭಿಪ್ರಾಯವನ್ನು ದೃಷ್ಟಾಂತದ ಮೂಲಕ ಸ್ಪಷ್ಟಪಡಿಸುತ್ತಾನೆ. ಕಾಳಿದಾಸನು ಸುಕುಮಾರವಾದ ಶೈಲಿಯ ಉಪಾಸಕ. ಲಾಲಿತ್ಯವನ್ನೂ ಮಾಧುರ್ಯವನ್ನೂ ಬಯಸುವವರು ಕಾಳಿದಾಸನ ಬಳಿ ಹೋಗಬೇಕು. ಆತನು ಮಾತಾಡಿದರೆ ದಿವ್ಯಾಮೃತವು ಪ್ರವಹಿಸುವುದು. ಕಾಳಿದಾಸನು ಮುದ್ದು ಪಾರ್ವತಿಯನ್ನು ವರ್ಣಿಸುವಾಗ, 'ಆಕೆಯು ಮಾತಾಡಿದಳೆಂದರೆ ಅಮೃತವು ಪ್ರವಹಿಸಿದಂತೆ ಇದ್ದಿತೆಂದೂ, ಆಕೆಯ ಸ್ವರಸಂಪತ್ತಿನ ಮುಂದೆ ಕೋಗಿಲೆಯ ಮಧುರಗಾನವೂ ಸಹ ಅಪಸ್ವರವಾಗಿ ಪರಿಣಮಿಸುತ್ತಿದ್ದಿತೆಂದೂ' ಹೇಳಿದ್ದಾನೆ. ಕವಿಯು ಈ ರೀತಿಯಾಗಿ ಪಾರ್ವತಿಯನ್ನು ವರ್ಣಿಸುತ್ತಿದ್ದಾಗ ತನ್ನ ಶೈಲಿಯನ್ನೇ ಕುರಿತು ಹಾಡುತ್ತಿದ್ದನೆನ್ನಬಹುದು :—

> ಸ್ವರೇಣ ತಸ್ಯಾಮಮೃತಸ್ರುತೇವ
> ಪ್ರಜಲ್ಪಿತಾಯಾಮಭಿಜಾತವಾಚಿ ।
> ಅಪ್ಯನ್ಯಪುಷ್ಟಾ ಪ್ರತಿಕೂಲಶಬ್ದಾ
> ಶ್ರೋತುರ್ವಿತಂತ್ರೀರಿವ ತಾಡ್ಯಮಾನಾ ॥

ಕುಮಾ. ೧-೪೫.

# ೯. ಕಾವ್ಯಗಳಲ್ಲಿ ಅಡಗಿರುವ ತತ್ತ್ವ

ಕಾಳಿದಾಸನು ಯಾವ ದಾರ್ಶನಿಕನಂತೆಯೂ ತನ್ನ ಕಾವ್ಯ ಗಳಲ್ಲಿ ತನ್ನವೇ ಒಂದು ತತ್ತ್ವವನ್ನು ಪ್ರತಿಪಾದಿಸಲು ಹೊರಟಿಲ್ಲ. ಹಾಗೆ ಮಾಡಿದ್ದಲ್ಲಿ ಆತನ ಕಾವ್ಯಗಳು ಬಹುಶಃ ಈಗಿರುವಷ್ಟು ರಮ್ಯವಾಗಿರುತ್ತಿರಲಿಲ್ಲ. ಆದರೂ ಆತನ ಕಾವ್ಯಗಳ ಅವಲೋಕನ ದಿಂದ ಆತನು ಪ್ರಕೃತಿಯನ್ನೂ ಪ್ರೇಮವನ್ನೂ ಕಂಡ ಬಗೆಯನ್ನು ತಿಳಿಯಬಹುದು. 'ಪ್ರಕೃತಿ' ಎಂದರೆ ಕಾಳಿದಾಸನ ಪ್ರಾಣವೆಂದು ಆತನ ಕಾವ್ಯಗಳಿಂದ ಅಭಿವ್ಯಕ್ತವಾಗುತ್ತದೆ. ಮೂರುಲೋಕ ಗಳೂ ಪ್ರಕೃತಿಯ ಉದರದಲ್ಲಿ ಅಡಗಿರುವುವೆಂಬುದೇ ಆತನ ಮತ. ಈ ಮೂರು ಲೋಕಗಳಿಗೂ ಐಕ್ಯವಿದೆಯೆಂದೂ ಭಿನ್ನತೆ ಇಲ್ಲವೆಂದೂ ಆತನು ಸಾರಿ ಹೇಳಿದ್ದಾನೆ. ಪ್ರತಿಲೋಕವೂ ಪ್ರಕೃತಿಯ ಬೇರೆಬೇರೆ ಭಾಗ ಮಾತ್ರ. ತಪೋವನಗಳೂ ಅವುಗಳ ನಿವಾಸಿಗಳೂ ಪಟ್ಟಣ ಮತ್ತು ಅಲ್ಲಿಯ ನಿವಾಸಿ ಗಳಿಂದ ಭಿನ್ನರಲ್ಲ. ತಪೋವನವು ಪ್ರಕೃತಿಯ ಶಾಂತಿ ಮತ್ತು ಸೌಮ್ಯದಿಂದ ಕೂಡಿದ ಮುಖವಾದರೆ ಪಟ್ಟಣವು ಲವಲವಿಕೆ ಯಿಂದಲೂ ಹುರುಪಿನಿಂದಲೂ ಕೂಡಿದ ಪ್ರಕೃತಿಯ ಮತ್ತೊಂದು ಮುಖ. ಪ್ರಕೃತಿಯು ಮನುಷ್ಯನ ಹೃದಯದಮೇಲೆ ಬಹು ಪರಿಣಾಮವನ್ನುಂಟುಮಾಡುತ್ತದೆ: ಕೆಲವು ವೇಳೆ ಹರುಷ ಗೊಳಿಸುವುದು ಮತ್ತೆ ಕೆಲವು ವೇಳೆ ದುಃಖಗೊಳಿಸುವುದು. ಇನ್ನೊಂದು ಬಾರಿ ನೊಂದ ಮನಸ್ಸನ್ನು ಸಂತೈಸುವುದು. ಈ ರೀತಿಯಾಗಿ ಚೇತನಾಚೇತನಪದಾರ್ಥಗಳು ಪರಸ್ಪರ ಪರಿಣಾಮ ಕಾರಿಗಳೆಂದೇ ಕಾಳಿದಾಸನು ಅಭಿಪ್ರಾಯಪಟ್ಟು, ಋತು ಸಂಹಾರದಲ್ಲಿ ಪ್ರಣಯಿಗಳ ಮನಸ್ಸಿನಮೇಲೆ ನಾನಾ ಋತು

ಗಳುಂಟುಮಾಡುವ ಪರಿಣಾಮಗಳನ್ನು ಸೂಚಿಸಿದ್ದಾನೆ. ಇದ ಲ್ಲದೆ, ಪ್ರಕೃತಿಯಲ್ಲಡಗಿರುವ ಒಂದು ವಸ್ತುವಿಗೆ ಮತ್ತೊಂದು ವಸ್ತುವನ್ನು ಕಂಡರೆ ಎಷ್ಟು ಪ್ರೇಮ ಮತ್ತು ಆದರ! ಪತಿ ಯಿಂದ ತ್ಯಕ್ತಳಾದ ಸೀತಾದೇವಿಯು ಅರಣ್ಯದಲ್ಲಿ ರೋದಿಸು ತ್ತಿರಲಾಗಿ, ಅವಳ ಸ್ಥಿತಿಯನ್ನು ಕಂಡು ವನದ ನಿರ್ಜೀವ ಪದಾರ್ಥಗಳೂ ಮೂಕ ಜಂತುಗಳೂ ಸಮಾನಶೋಕದಿಂದ ಕಣ್ಣೀರಿಟ್ಟುವಂತೆ !

> ನೃತ್ಯಂ ಮಯೂರಾಃ ಕುಸುಮಾನಿ ವೃಕ್ಷಾ
> ದರ್ಭಾನುಪಾತ್ತಾನ್ವಿಜಹುರ್ಹರಿಣ್ಯಃ ।
> ತಸ್ಯಾಃ ಪ್ರಪನ್ನೇ ಸಮದುಃಖಭಾವ-
> ಮತ್ಯಂತಮಾಸೀದ್ರುದಿತಂ ವನೇಽಪಿ ॥

ರಘು. ೧೪-೬೯

ನವಿಲುಗಳು ಕುಣಿತವನ್ನೂ, ವೃಕ್ಷಗಳು ಹೂ ಬಿಡುವುದನ್ನೂ ಜಿಂಕೆಗಳು ಗರುಕೆಯ ಹುಲ್ಲನ್ನೂ ತ್ಯಜಿಸಿದುವಂತೆ! ಈ ರೀತಿ ಯಾಗಿ ಕಾಳಿದಾಸನು ಪ್ರಕೃತಿಯಲ್ಲಿರುವ ಎಲ್ಲ ವಸ್ತುಗಳಿಗೂ ಸಂಬಂಧವಿದೆಯೆಂದೂ, ಯಾವ ಪದಾರ್ಥವೂ—ಚೇತನ ವಾಗಲಿ, ಅಚೇತನವಾಗಲಿ, ಮತ್ತೊಂದರಿಂದ ಭಿನ್ನವಲ್ಲ ವೆಂದೂ ಸಾರಿದ್ದಾನೆ. ಸಮಸ್ತ ವಸ್ತುವಿನಲ್ಲಿಯೂ ಐಕ್ಯವಿದೆ ಎಂದೂ ಹೇಳಿದ್ದಾನೆ.

ಕಾಳಿದಾಸನ ಕಾವ್ಯಗಳನ್ನು ಪ್ರಸ್ತಾಪಮಾಡುತ್ತ ನಾವು ತಿಳಿಯಬೇಕಾದ ಎರಡನೆಯ ವಿಷಯವು ಆತನು ಪ್ರೇಮವನ್ನು ಕಂಡ ಬಗೆ. " ಸ್ತ್ರೀಪುರುಷರ ಸುಖಸಾಮ್ರಾಜ್ಯಕ್ಕೆ ಕಾರಣವಾದ ಪ್ರೇಮವನ್ನು ಕಾಳಿದಾಸ ಕವಿಯು ಹಾಡಿದಂತೆ ಮಿಕ್ಕ ಯಾವ ದೇಶದ ಕವಿಯೂ ಹಾಡಿಲ್ಲ" ಎಂಬುದಾಗಿ ಪಾಶ್ಚಾತ್ಯ

ವಿದ್ವಾಂಸರೊಬ್ಬರು ಅಭಿಪ್ರಾಯಪಟ್ಟಿದ್ದಾರೆ. ಪ್ರೇಮವನ್ನು ಎಷ್ಟೋಜನ ಹಾಡಿದ್ದರೂ ಕಾಳಿದಾಸನ ವಿಶೇಷವೇನೆಂದರೆ ಆದರ್ಶಪ್ರೇಮವನ್ನು ಚಿತ್ರಿಸಲು ಪ್ರಯತ್ನಿಸಿದುದು. ಆದರ್ಶ ಪ್ರೇಮವು ಕಾಣಬೇಕಾದಲ್ಲಿ ಪ್ರಣಯಿಗಳಿಬ್ಬರೂ ಒಬ್ಬರಲ್ಲಿ ಮತ್ತೊಬ್ಬರು ಹೆಚ್ಚುಹೆಚ್ಚಾಗಿ ಪ್ರಣಯಾಸಕ್ತಿಯನ್ನು ತೋರುತ್ತಿರಬೇಕು—ಶಿವ-ಪಾರ್ವತಿ ಮತ್ತು ಯಕ್ಷ-ಯಕ್ಷ ಪತ್ನಿಯರಂತೆ. ನಾಯಕನು ನಾಯಿಕೆಯನ್ನು ಅತಿಯಾಗಿ ಬಯಸುವುದು, ನಾಯಿಕೆಯಾದರೋ ನಾಯಕನಲ್ಲಿ ಆಸಕ್ತಿ ಯನ್ನು ತೋರದಿರುವುದು, ಇಂತಹ ಸನ್ನಿವೇಶಗಳಲ್ಲಿ ಆದರ್ಶ ಪ್ರೇಮ ಏರ್ಪಡಲಾರದು. ಅಂದರೆ ಪರಸ್ಪರರಲ್ಲಿ ಅನುರಾಗ ವನ್ನು ತೋರ್ಪಡಿಸಿ ಪ್ರಣಯಿಗಳು ಸಮಾಗಮವನ್ನು ಹೊಂದಿದ ಮಾತ್ರಕ್ಕೆ ಅದು ಆದರ್ಶಪ್ರೇಮಕ್ಕೆ ದೃಷ್ಟಾಂತವೆ? ಕಾಳಿದಾಸನು ಆದರ್ಶಪ್ರೇಮವೆಂದು ಕರೆಯುವುದು ಇಂತಹ ಸಂದರ್ಭ ವನ್ನೆ? ಕವಿಯು " ಅವಾಪ್ಯತೇ ವಾ ಕಥಂ ಅನ್ಯಥಾ ದ್ವಯಂ ತಥಾವಿಧಂ ಪ್ರೇಮ ಪತಿಶ್ಚ ತಾದೃಶಃ " ಎಂದಾಗ " ತಥಾ ವಿಧಂ ಪ್ರೇಮ " ಎಂದರೇನರ್ಥ ?—ಇತ್ಯಾದಿ ಪ್ರಶ್ನೆಗಳೇಳು ತ್ತವೆ. ಕಾಳಿದಾಸನು ಪರಸ್ಪರರಲ್ಲಿ ಅನುರಕ್ತರಾದ ಪ್ರಣಯಿ ಗಳ ಸಮಾಗಮವನ್ನು ಹೇಳುವಾಗ, ಆತನು ಪ್ರೇಮದ ಮೊದ ಲನೆಯ ಮೆಟ್ಟಲನ್ನು ಸೂಚಿಸುತ್ತಿರುವನೆಂದು ನಾವು ತಿಳಿಯ ಬೇಕು. ಪ್ರೇಮದ ಎರಡನೆಯ ಮೆಟ್ಟಲೇ ಸಂಭೋಗ ಶೃಂಗಾರ ಚಿತ್ರ. ಸಂಭೋಗ ಶೃಂಗಾರದಲ್ಲಿ ನಾವು ಕಾಣುವುದು ಅಂಧ ಪ್ರೇಮ ಮತ್ತು ಸ್ವಾರ್ಥವಾದದ್ದು. ಈ ಪ್ರೇಮವು ಕೇವಲ ಶರೀರಕ್ಕೆ ಸಂಬಂಧಪಟ್ಟದ್ದು. ಆದುದರಿಂದಲೇ ಇದು ಕಾಳಿ ದಾಸನಿಗೆ ' ಆದರ್ಶಪ್ರೇಮ 'ವೆಂದು ಕಂಡುಬರಲಿಲ್ಲ. ಆದರ್ಶ

ಪ್ರೇಮವನ್ನು ತೋರಲು ವಿಪ್ರಲಂಭಶೃಂಗಾರವನ್ನು ಚಿತ್ರಿಸಲುಪ ಕ್ರಮಿಸಿದನು. ವಿಪ್ರಲಂಭವು ಆದರ್ಶ ಪ್ರೇಮದ ಕೊನೆಯ ಅತಿ ಮುಖ್ಯವಾದ ಮೆಟ್ಟಲು ಎಂಬುದೇ ಕಾಳಿದಾಸನ ಮತ. ಸಂಭೋಗದಲ್ಲಿ ಕಾಣುವ ಪ್ರೇಮವು ವಿಪ್ರಲಂಭದಲ್ಲಿ ಪರೀಕ್ಷಿ ಸಲ್ಪಡಬೇಕು. ಯಕ್ಷಪತ್ನಿಯು ಯಕ್ಷನನ್ನು ಅಗಲಿ ಹೀನಾಗಿ ಕಾಂತಿಕಂದಿ ಕುಗ್ಗಿಹೋದಳು! ಯಕ್ಷನಾದರೋ ಸತಿಯು ತನ್ನ ವಿಚಾರವನ್ನೇ ತಿಳಿಯದೆ ಎಲ್ಲಿ ಕೊರಗುವಳೋ ಎಂದು ತಿಳಿದು ಮೇಘದ ನಿರ್ಜೀವಿತೆಯನ್ನು ಸಹ ಪರಿಗಣಿಸದೆ ತನ್ನ ಸಂದೇಶವೊಂದನ್ನು ಪ್ರೇಯಸಿಗೆ ತಿಳುಹಬೇಕೆಂದು ಪ್ರಾರ್ಥಿಸಿ ಕೊಳ್ಳುವನಲ್ಲವೆ? ಸತಿಪತಿಯರಿಗಿದ್ದ ಇಷ್ಟು ದೃಢವಾದ ಪ್ರೇಮ ಅವರ ಅಗಲಿಕೆಯಿಂದ ತಾನೇ ಚೆನ್ನಾಗಿ ವ್ಯಕ್ತವಾ ದದ್ದು? ಹಾಗೆಯೇ ಇಂದುಮತಿಯು ಮೃತಳಾಗಲು ಅಜನ ಜೀವವೇ ಹಾರಿಹೋದಂತಾಯಿತು! ಮನ್ಮಥನು ಮೃತನಾ ಗಲು ರತಿಯು ತನ್ನ ಜೀವವನ್ನೇ ಬಿಡಲುದ್ಯುಕ್ತಳಾಗುವಳು. ಈ ನಿದರ್ಶನಗಳಿಂದ ತಿಳಿಯಬಹುದಾದುದೇನೆಂದರೆ, ನಿಜ ವಾದ ಪ್ರೇಮವು ವಿಪ್ರಲಂಭ ಅಂದರೆ ಅಗಲುವಿಕೆಯಲ್ಲಿಯೇ ಹೊರಬೀಳುವುದೆಂದು. ಈ ವಿಪ್ರಲಂಭಾಗ್ನಿಯಲ್ಲಿ ಬೆಂದು ಗೆದ್ದು ಬಂದುದೇ ಆದರ್ಶಪ್ರೇಮ. ಇಲ್ಲಿ ಪ್ರಣಯಿಗಳು ಮೋಹಗೊಳ್ಳು ವುದು ಕೇವಲ ಪರಸ್ಪರರ ರೂಪದಿಂದಲ್ಲ, ಅವರ ಗುಣದಿಂದ. ಪಾರ್ವತಿಯು ಶಿವನನ್ನು ಒಲಿಸಿಕೊಳ್ಳಲು ತನ್ನ ರೂಪದ ಸಹಾಯವನ್ನು ಮೊದಲು ಕೋರಿದಳು. ಆದರೆ ರೂಪವು ಆಕೆಗೆ ಸಹಾಯ ಮಾಡಲಿಲ್ಲ. ಇದನ್ನರಿತು ರೂಪವನ್ನಲ್ಲಗ ಳೆದು ಘೋರತಪಸ್ಸನ್ನು ಕೈಗೊಂಡಳು. ಆಕೆಯ ಭಕ್ತಿಗೆ ಶಿವನು ಮೆಚ್ಚಿದನು—ಪಾರ್ವತೀ-ಪರಮೇಶರು ಪತಿಪತ್ನಿಯ

ರಾದರು. ಈ ವೃತ್ತಾಂತದಿಂದ ಕಾಳಿದಾಸನು ಆದರ್ಶಪ್ರೇಮ
ವನ್ನು ಭಕ್ತಿಯ ಮಟ್ಟಕ್ಕೇರಿಸುತ್ತಾನೆ. ಪಾರ್ವತಿಯ ಪ್ರೇಮ
ದಂತಹ ಸ್ವಾರ್ಥರಹಿತವಾದ, ದೈವಿಕವಾದ, ಪವಿತ್ರವಾದ
ಮತ್ತು ಸಾತ್ವಿಕವಾದ ಪ್ರೇಮವನ್ನೇ ಕಾಳಿದಾಸನು ಆದರ್ಶ
ಪ್ರೇಮವೆಂದು ಸಾರುವುದು. ಇಂತಹ ಪ್ರೇಮವು "ಅರ್ಧನಾರೀ
ಶ್ವರತ್ವ" ದಲ್ಲಿ ಕೊನೆಗಾಣುತ್ತದೆ. ಈ ಆದರ್ಶಪ್ರೇಮವಾದರೋ
ಏಕಪತ್ನೀತ್ವವನ್ನವಲಂಬಿಸಿದುದು. ಶ್ರೀರಾಮನು ಕಾರಣಾಂತರ
ಗಳಿಂದ ಸೀತೆಯನ್ನು ತ್ಯಾಗಮಾಡಿದರೂ, ಯಾಗಾದಿಗಳನ್ನು
ಮಾಡುವ ಸಂದರ್ಭಗಳಲ್ಲಿ ಬಂಗಾರದ ಸೀತಾಪ್ರತಿಮೆಯನ್ನು
ಪಕ್ಕದಲ್ಲಿರಿಸಿಕೊಂಡು ಆ ಸುಕಾರ್ಯಗಳನ್ನು ಮಾಡಿದುದು
ಯಾರಿಗೆ ತಿಳಿಯದ ವಿಷಯ? ಇಂತಹ ನಿಜವಾದ ಪ್ರೇಮವು
ಪುತ್ರರತ್ನ ಜನನದಲ್ಲಿ ಕೊನೆಗಾಣುವುದೆಂಬುದೇ ಕಾಳಿದಾಸನ
ಮತ. ರಘುವು ದಿಲೀಪ ಮತ್ತು ಸುದಕ್ಷಿಣೆಯರ, ಕುಮಾರನು
ಶಿವ-ಪಾರ್ವತಿಯರ ದಿವ್ಯಪ್ರೇಮದ ಫಲಗಳು. ಇಂತಹ
ಆದರ್ಶಪ್ರೇಮವನ್ನು ಸಹೃದಯರಿಗೆ ಪರಿಚಯಮಾಡುವುದೇ
ಕಾಳಿದಾಸನ ಮುಖ್ಯೋದ್ದೇಶ.

---

## ೧೦. ಉಪಸಂಹಾರ

ಕಾಳಿದಾಸನ ಕಾವ್ಯಗಳಲ್ಲಿ ಪಾಶ್ಚಾತ್ಯದೇಶಗಳ ಪ್ರಸಿದ್ಧ
ಸಾಹಿತಿಗಳ ಕಾವ್ಯಗಳಲ್ಲಿರುವಂತೆ ವಿಧಿಯೊಡನೆ ಮನುಷ್ಯನ
ಹೋರಾಟವಾಗಲಿ, ಮಹಾವ್ಯಕ್ತಿಗಳು ಸಂದರ್ಭಗಳ ಬಿರು
ಗಾಳಿಗೆ ಸಿಕ್ಕಿ ಕಷ್ಟಪಡುವುದಾಗಲಿ, ಮಹಾಪಾತ್ರವೊಬ್ಬನು

ತನ್ನ ಅಲ್ಪ ಅಪರಾಧಕ್ಕಾಗಿ ಮಹದ್ದುಃಖವನ್ನು ಅನುಭವಿಸು ವುದಾಗಲಿ ಅಥವಾ ಸಮಾಜದ ಅಸಹನೀಯವಾದ ಲೋಪ ದೋಷಗಳಾಗಲಿ ಚಿತ್ರಿತವಾಗಿಲ್ಲ; ಕಾಳಿದಾಸನು ಆಶಾ ವಾದಿ. ಕಾಳಿದಾಸನಿಗೆ ವಿಶ್ವಸಾಹಿತ್ಯದಲ್ಲಿ ಪೂಜ್ಯಸ್ಥಾನ ದೊರೆ ತಿದ್ದರೆ ಅದಕ್ಕೆ ಅನೇಕ ಕಾರಣಗಳುಂಟು. ಆತನ ಕಾವ್ಯ ಗಳಲ್ಲಿ ವಿಶ್ವಸಾಮಾನ್ಯಗುಣಗಳಿರುವುದು ಮೊಟ್ಟಮೊದಲಿನ ಮುಖ್ಯಕಾರಣ. ಆತನು ಸರ್ವರ ಅನುಭವಕ್ಕೆ ವೇದ್ಯವಾದ ಶೃಂಗಾರವನ್ನು ಅಸಭ್ಯಶರೀತಿಯಲ್ಲಿ ಚಿತ್ರಿಸಿರುವುದಲ್ಲದೆ ಅದನ್ನು ಅನ್ಯಾದೃಶವಾದ ಮಧುರಶೈಲಿಯಲ್ಲಿ ವರ್ಣಿಸಿರುವನು. ಇದರ ಜೊತೆಗೆ ಪ್ರಕೃತಿಯನ್ನೂ ಆದರ್ಶಪ್ರೇಮವನ್ನೂ ಕುರಿತು ಕಾವ್ಯ ಗಳಲ್ಲಿ ಹಾಡಿರುವುದು ಮತ್ತೂ ವಿಶೇಷ. ಈ ಗುಣಗಳಿಂದ ಉತ್ಪನ್ನವಾದ ಕಾವ್ಯಗಳ ರಮ್ಯತೆಯು ಜಗತ್ತನ್ನೇ ಮೋಹ ಗೊಳಿಸಿದೆ.

ಭರತಖಂಡದಲ್ಲಂತೂ ಕಾಳಿದಾಸನಿಗೆ ಬಹು ಗೌರವ ಸ್ಥಾನವು ದೊರೆತಿದೆ. ವಾಲ್ಮೀಕಿ ವ್ಯಾಸರು ಸೃಷ್ಟಿಕರ್ತನಂತೆ ಅನೇಕ ಮತ್ತು ವಿವಿಧ ಪಾತ್ರಗಳನ್ನು ಸೃಷ್ಟಿಸಬಲ್ಲರು. ಕಾಳಿದಾಸನು ಪಾತ್ರಸೃಷ್ಟಿಯಲ್ಲಿ ಇಷ್ಟು ಚತುರನಲ್ಲ. ಆದರೆ ತನ್ನ ಪೂರ್ವದವ ರಾದ ವಾಲ್ಮೀಕಿ ಮತ್ತು ವ್ಯಾಸರುಗಳಿಂದ ಸೃಷ್ಟಿಸಲ್ಪಟ್ಟ ಪಾತ್ರ ಗಳನ್ನು ಕುರಿತು ಸೊಗಸಾಗಿ ಹಾಡಬಲ್ಲ ಅಮೋಘ ಕವಿ. ಅಲ್ಲದೆ, 'ಮೇಘದೂತ' 'ಋತುಸಂಹಾರ'ಗಳಂತಹ ಹೊಸ ಹೊಸ ಕಾವ್ಯರೂಪಗಳನ್ನು ರಚಿಸಿದವನೆಂದರೆ ಕಾಳಿದಾಸ. ಆತ 'ಲಘುಪುರಾಣ' ಗಳನ್ನು ಅಚ್ಚುಮೆಚ್ಚಾಗಿ ಬರೆದ ಮೊಟ್ಟ ಮೊದಲಿನ ಕವಿ. ಈತನು ಹಾಕಿದ ಮೇಲ್ಪಂಕ್ತಿಯನ್ನು ಅನು ಸರಿಸಿಯೇ ಭರತಖಂಡದ ಇತರ ಕವಿಗಳು ಕಾವ್ಯಗಳನ್ನು ಬರೆ

ದರು. ಇವೆಲ್ಲಕ್ಕಿಂತಲೂ ಮಿಗಿಲಾಗಿ ಕಾಳಿದಾಸನು ವೈದರ್ಭೀ ರೀತಿಯಲ್ಲಿ ಹಾಡಿದವರಲ್ಲೆಲ್ಲಾ ಕಿರೀಟಪ್ರಾಯದವನು. ವಾಲ್ಮೀಕಿ, ವ್ಯಾಸ, ಭಾಸ, ಅಶ್ವಘೋಷಾದಿಗಳು ಕಾಳಿದಾಸನ ಮೇಲೆ ಪರಿಣಾಮವನ್ನುಂಟುಮಾಡಿದಂತೆ ಕಾಳಿದಾಸನು ತನ್ನ ಮಹತ್ವದಿಂದ ತನ್ನ ಬಳಿಕ ಬಂದ. ಭಾರವಿ, ಬಾಣ, ಹರ್ಷ, ಭವಭೂತಿ, ಮುಂತಾದವರ ಮೇಲೆ ಪರಿಣಾಮವುಂಟು ಮಾಡಿರುವನು. ಒಂದು ಮಾತಿನಲ್ಲಿ ಹೇಳಬಹುದಾದರೆ, ಕಾಳಿ ದಾಸನು ಅದ್ವಿತೀಯ ಮಹಾಕವಿ. ಆತನ ಕವಿತಾ ಸಾಮರ್ಥ್ಯ ವನ್ನು ಸಾರುವ ಈ ಸುಭಾಷಿತವು ಭರತಖಂಡದ ಜನರ ಮನೆ ಮಾತಾಗಿದೆ—

ಪುರಾ ಕವೀನಾಂ ಗಣನಾಪ್ರಸಂಗೇ
ಕನಿಷ್ಠಿಕಾಽಧಿಷ್ಠಿತಕಾಲಿದಾಸಾ |
ಅದ್ಯಾಪಿ ತತ್ತುಲ್ಯಕವೇರಭಾವಾ-
ದನಾಮಿಕಾ ಸಾರ್ಥವತೀ ಬಭೂವ ||

ಹಿಂದೆ ಒಂದು ಬಾರಿ ಕವಿಗಳನ್ನು ಎಣಿಸುವ ಸಂದರ್ಭವೊದ ಗಿತು. ಕಾಳಿದಾಸನ ಹೆಸರು ಮೊಟ್ಟಮೊದಲು ಸೂಚಿತವಾಗಲು ಆತನಿಗೆ ಕಿರಿಬೆರಳು ಮೀಸಲಾಯಿತು. ಕಾಳಿದಾಸನಿಗೆ ಸಮಾನನಾದ ಮತ್ತೊಬ್ಬ ಕವಿಯು ಈಗಿನವರೆಗೂ ಹುಟ್ಟಿ ದಿರುವುದರಿಂದ ಕಿರಿಬೆರಳಿನ ಪಕ್ಕದ ಬೆರಳಿಗೆ 'ಅನಾಮಿಕಾ' (ಹೆಸರಿಲ್ಲದ್ದು) ಎಂಬುದಾಗಿ ನಾಮಕರಣಮಾಡಿದುದು ಸಾರ್ಥಕವಾಯಿತು.



ಪ್ರಚಾರಪುಸ್ತಕಮಾಲೆಯನ್ನು ಕುರಿತು

# ಕೆಲವು ಅಭಿಪ್ರಾಯುಗಳು

---

" ಜನಸಾಮಾನ್ಯಕ್ಕೆ ಗಾಢವಾದ ಆಸಕ್ತಿಯಿರುವ ವಿಷಯಗಳ ಮೇಲೆ ವಿಶ್ವವಿದ್ಯಾನಿಲಯದ ಅಧ್ಯಾಪಕರು ಕೊಟ್ಟ ಪ್ರಚಾರೋಪನ್ಯಾಸಗಳನ್ನು ಈ ರೀತಿಯಾಗಿ ಸ್ಥಿರರೂಪದಲ್ಲಿ ನಿಲ್ಲಿಸಬೇಕೆಂಬ ವಿಶ್ವವಿದ್ಯಾನಿಲಯದ ಈ ಪ್ರಯತ್ನವು ನನಗೆ ಮೆಚ್ಚಿಕೆಯಾಗಿದೆ. . . . ಈ ಉದ್ಯಮಕ್ಕಾಗಿ ವಿಶ್ವವಿದ್ಯಾನಿಲಯವನ್ನು ನಾನು ತುಂಬ ಆದರದಿಂದ ಅಭಿನಂದಿಸುತ್ತೇನೆ."

—ಅಮೀನ್-ಉಲ್-ಮುಲ್ಕ್
ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು.

---

" ಸ್ವಾರಸ್ಯಪೂರ್ಣ ವಿಷಯಗಳನ್ನು ಕುರಿತು ಇಷ್ಟು ಸುಂದರವಾದ ಕೈಪಿಡಿಗಳನ್ನು ಪ್ರಕಟಿಸಿರುವುದಕ್ಕಾಗಿ ನಿಮ್ಮನ್ನು ಅಭಿನಂದಿಸುತ್ತೇನೆ. ಇವು ಆಚ್ಚರಿಗೊಳಿಸುವಷ್ಟು ಅಗ್ಗವಾಗಿವೆ; ಒಳ್ಳೆಯ ಮುದ್ರಣಕ್ಕೆ ಇಲ್ಲಿರುವುದಕ್ಕಿಂತ ಹೆಚ್ಚಾಗಿ ಬಯಸಬೇಕಾದದ್ದೇನಿದೆ ? "

—ಶ್ರೀಮಾನ್ ರಾ. ರಾ. ದಿವಾಕರ ಅವರು.

" ಇವು ಜೇಬಿನಲ್ಲಿ ಅಡಗಬಹುದಾದ ಸಣ್ಣ ಆಕಾರದಲ್ಲಿ ಮುದ್ದಾಗಿ ಅಚ್ಚಾಗಿವೆ. . . . ಆಯಾ ಶಾಸ್ತ್ರದಲ್ಲಿ ನುರಿತ ವಿದ್ವಾಂಸರು ಸಪ್ರಮಾಣವಾಗಿ, ರಸವತ್ತಾಗಿ, ಸುಲಭವಾಗಿ ಬರೆದಿರುತ್ತಾರೆ. . . . "

—'ಪ್ರಬುದ್ಧ ಕರ್ಣಾಟಕ.'

---

" ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದವರು ನಡೆಸುತ್ತಿರುವ ಸಂಸ್ಕೃತಿಯ ಸಪ್ತಾಹಗಳ ಬೆಲೆಯನ್ನು ಕಟ್ಟುವುದಕ್ಕೆ ಆಗುವುದಿಲ್ಲ. ಸಂಸ್ಕೃತಿ ಪ್ರಸಾರವನ್ನು ಮೀರಿಸಿದ ಕೆಲಸ ಇನ್ನೊಂದುಂಟೆ? ಖಂಡಿತವಾಗಿಯೂ ಇಲ್ಲ. ಆದಕಾರಣ ಲಘು ಸಾಹಿತ್ಯವನ್ನು ಸಿದ್ಧಮಾಡಿಸಿ ಅವುಗಳನ್ನು ಜನಸಾಮಾನ್ಯದಲ್ಲಿ ಪ್ರಕಟಿಸುತ್ತಿರುವ ವಿಶ್ವವಿದ್ಯಾನಿಲಯದವರನ್ನು ನಾವು ಎಷ್ಟು ವಿಧವಾಗಿ ಹೊಗಳಿದರೂ ಕಡಿಮೆ. ಈ ಉಪಕಾರಕ್ಕಾಗಿ ಕನ್ನಡನಾಡಿನ ಜನರು ವಿಶ್ವವಿದ್ಯಾನಿಲಯಕ್ಕೆ ಅತ್ಯಂತ ಋಣಿಗಳಾಗಿದ್ದಾರೆ. . . . . . . . . . . . . . . . . . .

ವಿಶ್ವವಿದ್ಯಾನಿಲಯದ ಉದ್ದಿಶ್ಯವು ಇಂತಹ ಪ್ರೌಢ ಪ್ರಬಂಧಗಳಿಂದ ಸಾರ್ಥಕವಾಗುವುದರಲ್ಲಿ ಲೇಶವೂ ಸಂದೇಹವಿಲ್ಲ. ಪ್ರಚಾರಪುಸ್ತಕ ಮಾಲೆಯ ವ್ಯವಸ್ಥಾಪಕರನ್ನು ಅಭಿನಂದಿಸಲೇಬೇಕು. ಮುದ್ದಾದ ಅಚ್ಚು, ಕಟ್ಟು. ಬೆಲೆ ಕೇವಲ ೨ ಆಣೆ."

—'ವಿಶ್ವ ಕರ್ಣಾಟಕ.'

೧೦. ಪಂಪ—ತೀ. ನಂ. ಶ್ರೀಕಂಠಯ್ಯ, ಎಂ.ಎ.

೧೧. ಪ್ರಾಣಿಜೀವನ—ಎ. ನಾರಾಯಣರಾವ್, ಎಂ.ಎಸ್‌ಸಿ.

೧೨. ಕನಸುಗಳು—ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.

೧೩. ಮದುವೆ—ನಾ. ಕಸ್ತೂರಿ, ಎಂ.ಎ., ಬಿ.ಎಲ್.

೧೪. ನಮ್ಮ ಆರ್ಥಿಕ ದೃಷ್ಟಿ—ಎಸ್. ಗೋಪಾಲಸ್ವಾಮಿ, ಎಂ.ಎ.

೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.

೧೬. ಬೆಳಕು—ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.

೧೭. ಕರ್ನಾಟಕ ಕಾದಂಬರಿ—ವಿ. ಸೀತಾರಾಮಯ್ಯ, ಎಂ.ಎ.

೧೯೪೦-೪೧ ರಲ್ಲೂ ಹನ್ನೆರಡು ಪುಸ್ತಕಗಳು ಅಚ್ಚಾಗುವುವು :

ಸಾಧಾರಣ ಪ್ರತಿ ೨ ಆಣೆ; ವಾರ್ಷಿಕ ಚಂದಾ ರೂ. ೧-೪-೦ ;

ಉತ್ತಮ ಪ್ರತಿ ೩ ಆಣೆ ; ವಾರ್ಷಿಕ ಚಂದಾ ರೂ. ೨-೦-೦.

ವಿ. ಪಿ. ಮೂಲಕ ಪುಸ್ತಕಗಳನ್ನು ತರಿಸಿಕೊಳ್ಳುವುದರ ಬದಲು ಮುಂಗಡವಾಗಿ ಹಣವನ್ನು ಕಳುಹಿಸಿ ತರಿಸಿಕೊಂಡರೆ ನಾಲ್ಕು ಆಣೆಗಳು ಉಳಿತಾಯವಾಗುವುವು.

೧೮. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್, ಎಂ.ಎ.

೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—ಸಿ. ಜಿ. ಸತ್ಯಗಿರಿನಾಥನ್, ಎಂ.ಎ.